# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

ನಾಗರಿಕ ಸಮಾಜವೆಂಬುದು ಅನೇಕ ಅಂತಸ್ತುಗಳುಳ್ಳ ಭವನದಂತಹುದು. ಪ್ರತಿ ಅಂತಸ್ತಿನಲ್ಲಿರುವವನಿಗೂ ಒಂದು ಕೊರತೆ ಕಾಣುತ್ತಾ ಇರುತ್ತದೆ. ಕೆಳಗಿನ ಅಂತಸ್ತಿನವನು ತನಗಿಂತ ಮೇಲಿನ ಅಂತಸ್ತಿನಲ್ಲಿರುವವನ ಜೀವಿತವೇ ಆನಂದಕರವಾದುದೆಂದೂ, ಕೆಳಗಿನ ಅಂತಸ್ತಿನವನದು ಕಷ್ಟಕರವಾದುದೆಂದೂ ಅಂದುಕೊಳ್ಳುತ್ತಾನೆ. ಇದು ಸುಳ್ಳೆನ್ನುವಂತೆಯೂ ಇಲ್ಲ. ಒಂದೊಂದು ಅಂತಸ್ತು ಮೇಲಕ್ಕೇರಿದ ಹಾಗೆ ಆ ವ್ಯಕ್ತಿಯ ಮೌಲ್ಯಬೆಳೆದರೂ, ಮೇಲೆ ಹೇಳಿದ ಕೊರತೆ ಹಾಗೇ ಅಂಟಿಕೊಂಡಿದ್ದು, ವ್ಯಕ್ತಿಗಳ ನಡುವಿನಲ್ಲಿರಬೇಕಾದ ನೆಮ್ಮದಿ ಇಳಿಮುಖವೇ ಆಗುತ್ತದೆ. ಆದುದರಿಂದ ಕೆಲವರು ಮೇಲಿನ ಅಂತಸ್ತಿನ ಅವಕಾಶವನ್ನು ಕೂಡಾ ಬಿಟ್ಟು ಬಿಡುತ್ತಾರೆ. ಈ ತಿಂಗಳಿನ "ಅಂತರಾರ್ಥ" ಎಂಬ ಬೇತಾಳ ಕಥೆ ಈ ವಿಚಾರವನ್ನು ನಿರೂಪಿಸುವಂತಹುದು.

ಸಂಪುಟ: ೨೮ ಮಾರ್ಚಿ '೭೭ ಸಂಚಿಕೆ: ೯

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






ತ್ಯಾಜ್ಯಂ ನ ಧೈರ್ಯಂ ವಿದುರೇಪಿ ಕಾಲೇ
ಧೈರ್ಯಾತ್ ಕದಾಚಿತ್ ಗತಿಮಾಪ್ನುಯಾತ್ ಸಃ
ಯಥಾ ಸಮುದ್ರೇಪಿ ಚ ಪೋತಭಂಗೇ
ಸಾಂ ಯಾತ್ರಿಕೋ ವಾಂಛತಿ ತರ್ತುಮೇವ ೧.

ಕಷ್ಟಕಾಲದಲ್ಲಿ ಕೂಡಾ ಧೈರ್ಯಬಿಡಬಾರದು. ಧೈರ್ಯವಿದ್ದರೆ ತಪ್ಪಿಸಿಕೊಳ್ಳುವ ಮಾರ್ಗ ಕಾಣಬಹುದು. ಸಮುದ್ರದಲ್ಲಿ ಹಡಗು ಒಡೆದರೆ ಯಾತ್ರಿಕನು ತಪ್ಪಿಸಿಕೊಳ್ಳಲಿಕ್ಕೇ ನೋಡುತ್ತಾನೆ.

ವ್ಯಸನೇ ಮಿತ್ರಪರೀಕ್ಷಾ
ಶೂರಪರೀಕ್ಷಾ ರಣಾಂಗಣೇ ಭವತಿ
ವಿನಯೇ ಭೃತ್ಯಪರೀಕ್ಷಾ
ದಾನಪರೀಕ್ಷಾ ಚ ದುರ್ಭಿಕ್ಷೇ ೨.



ಕಷ್ಟಕಾಲದಲ್ಲಿ ಮಿತ್ರಪರೀಕ್ಷೆಯೂ, ರಣರಂಗದಲ್ಲಿ ಶೂರಪರೀಕ್ಷೆಯೂ, ವಿನಯದಲ್ಲಿ ಸೇವಕನ ಪರೀಕ್ಷೆಯೂ, ಬರಗಾಲದಲ್ಲಿ ದಾನಪರೀಕ್ಷೆಯೂ ಆಗುತ್ತವೆ.

ನ ಸದಶ್ವಾಃ ಕಶಾಘಾತಂ
ನ ಸಿಂಹಾ ಘನಗರ್ಜಿತಂ
ಪರೈರಂಗುಲಿ ನಿರ್ದಿಷ್ಟಂ
ನ ಸಹಂತೇ ಮನಸ್ವಿನಃ ೩.

ಒಳ್ಳೆಯ ಕುದುರೆಗಳು ಏಟು ತಿನ್ನವು; ಸಿಂಹಗಳು ಮೇಘಗರ್ಜನೆಗಳನ್ನು ಸಹಿಸವು; ಸ್ವಾಭಿಮಾನವುಳ್ಳವನು ಇನ್ನೊಬ್ಬನಿಂದ ಬೆರಳೆತ್ತಿ ತೋರಿಸಲ್ಪಡುವುದನ್ನು ಸಹಿಸನು.

---

ಪ್ರಮಾಣಗಳು

---



# ಮಿತ್ರಲಾಭ

೪೪

ಸರೋವರತೀರದಲ್ಲಿ ಆ ನಾಲ್ಕು ಮಿತ್ರಪ್ರಾಣಿಗಳೂ ಸುಖಸಂತೋಷಗಳಿಂದ ಹಾಯಾಗಿ ಕಾಲ ಕಳೆಯುತ್ತಿದ್ದುವು. ಹೀಗಿರಲು ಒಂದು ದಿನ ಅವುಗಳ ಗುಂಪಿನಲ್ಲಿ ಚಿತ್ರಾಂಗ ಜಿಂಕೆ ಹಾಜರಾಗದೆ ಹೋಯಿತು. ಸಮೀಪಲ್ಲೆಲ್ಲಿಯೂ ಅದರ ಸುಳಿವು ಇಲ್ಲದಿರುವುದನ್ನು ನೋಡಿ ಉಳಿದ ಮಿತ್ರರು ಮೂವರೂ "ಇದೇನಾಶ್ಚರ್ಯ? ಚಿತ್ರಾಂಗನಿಗೆ ಏನಾಗಿರಬಹುದು? ಸಿಂಹವೇನಾದರೂ ಹಿಡಿದು ಕಬಳಿಸಿರಲಿಕ್ಕಿಲ್ಲವಷ್ಟೆ? ಅಥವಾ ಬೇಟೆಗಾರನ ಉರುಳಿಗೆ ಸಿಕ್ಕಿಬಿಟ್ಟಿರಲಿಕ್ಕಿಲ್ಲವಷ್ಟೆ? ಅಲ್ಲದಿದ್ದರೆ ಎಲ್ಲಾದರೂ ಕಾಡುಗಿಚ್ಚಿನ ನಡುವೆ ಸಿಕ್ಕಿಬಿದ್ದಿರಲಾರದಷ್ಟೇ? ಬರಲೇಬೇಕಿತ್ತಲ್ಲ?" ಎಂದು ಚಿಂತಿಸತೊಡಗಿದುವು.

ಕಡೆಗೆ ಮಂಥರಕ ಆಮೆ ಕಾಗೆಯನ್ನು ನೋಡಿ, "ಪಾಪ, ಅದನ್ನು ಹುಡುಕಿಕೊಂಡು ಹೋಗಲು ನನಗೂ ಇಲಿಗೂ ಸಾಧ್ಯವಾಗುವ ಮಾತಲ್ಲ. ಆದುದರಿಂದ ನೀನು ಅರಣ್ಯದ ಮೇಲೆ ಹಾರುತ್ತಾ ಹೋಗಿ ಚಿತ್ರಾಂಗವು ಬದುಕಿದೆಯೋ ಇಲ್ಲವೋ ನೋಡಿಕೊಂಡು ಬರುವುದು ಒಳ್ಳೆಯದು" ಎಂದಿತು.

ಲಘುಪತನಕ ಕಾಗೆ ಕೂಡಲೇ ಆಕಾಶಕ್ಕೆ ಹಾರಿ ಹುಡುಕುತ್ತಾ ಹೋಗಿ ಆ ಸರೋವರಕ್ಕೆ ಸಮೀಪದಲ್ಲೇ ಉರುಳಿನಲ್ಲಿ ಸಿಕ್ಕಿಕೊಂಡಿದ್ದ ಚಿತ್ರಾಂಗವನ್ನು ನೋಡಿತು. ಅದು ಒಮ್ಮೆಗೇ ದುಃಖದಿಂದ ಕೆಳಗೆ ಬಂದು "ಮಿತ್ರ ಚಿತ್ರಾಂಗಾ! ಏನಿದು?" ಎಂದಿತು.

ಮಿತ್ರನ ದರ್ಶನದಿಂದ ಚಿತ್ರಾಂಗನ ದುಃಖ ಕಟ್ಟೆ ಒಡೆದಂತೆ ಹೊರಟಿತು. ಅದು ಅಳುಗೊರಲಿನಿಂದ ಕಾಗೆಯನ್ನು ನೋಡಿ, "ಮಿತ್ರಾ, ನನ್ನ ಕಾಲ ತೀರಿತು. ಈ ಕಟ್ಟಕಡೆಯ ಕ್ಷಣದಲ್ಲಿ ಮಿತ್ರನ ದರ್ಶನವಾಯಿತು. ನನ್ನ ಕೊನೆಯಾಸೆ ಇದಕ್ಕಿಂತ ಹೆಚ್ಚೇನಿರುತ್ತೆ? ಏನಾದರೂ ಪ್ರಸಂಗವಶಾತ್ ನಾನು ಕೆಟ್ಟ ಮಾತು ಆಡಿದ್ದರೆ ನನ್ನನ್ನು ಕ್ಷಮಿಸು. ಅದೇ ವಿಧವಾಗಿ ಇಲಿ ಹಿರಣ್ಯಕನಿಗೂ, ಆಮೆ ಮಂಥರಕನಿಗೂ ಹೇಳು." ಎಂದಿತು.

ಅದನ್ನು ಕೇಳಿ ಕಾಗೆ, "ಮಿತ್ರನೇ, ನನ್ನಂತಹ ಮಿತ್ರನು ಸಹಾಯಕ್ಕಿರುವಾಗ ಏಕೆ ಜೀವದ ಮೇಲೆ ನಿರಾಶೆ ತಾಳುತ್ತೀ? ನಾನು ಈಗಲೇ ಹೋಗಿ ಹಿರಣ್ಯಕನನ್ನು ಕರೆದು ತರುತ್ತೇನೆ. ಆತ ನಿನ್ನ

ಹಿಂಬದಿಯ ಚಿತ್ರಕಥೆ



ಉರುಳನ್ನು ಕ್ಷಣಮಾತ್ರದಲ್ಲಿ ಕಡಿದು ಬಿಡಿಸಿಬಿಡುತ್ತಾನೆ." ಎಂದು ಸಮಾಧಾನ ಹೇಳಿತು.

ಜಿಂಕೆ ಬೆರಗುಗಣ್ಣುಗಳಿಂದ ನೋಡುತ್ತಿರಲು, ಕಾಗೆ ವೇಗವಾಗಿ ಆಮೆಯೂ ಇಲಿಯೂ ಇರುವಲ್ಲಿಗೆ ಹಿಂದಿರುಗಿ, ಚಿತ್ರಾಂಗಕ್ಕೆ ಬಂದಿರುವ ಅಪಾಯದ ಸಂಗತಿಯನ್ನು ತಿಳಿಸಿತು. ಹಾಗು ಕೂಡಲೇ ಹಿರಣ್ಯಕವನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಚಿತ್ರಾಂಗವಿರುವಲ್ಲಿಗೆ ಬಂದಿತು.

ಹೇಳಿದಂತೆಯೇ ಕಾಗೆ ಮಿತ್ರನೊಂದಿಗೆ ಬಂದುದನ್ನು ನೋಡಿ, ಜಿಂಕೆ ಸಂತೋಷದಿಂದ, "ಬುದ್ಧಿವಂತನಾದವನು ಆಪತ್ತಿನಲ್ಲಿ ಸಿಕ್ಕಿ ಸಹಾಯ ಪಡೆಯಬೇಕಾದರೆ ನಿಮ್ಮಂತಹ ಸನ್ಮಿತ್ರರನ್ನು ಸಂಪಾದಿಸಿಕೊಳ್ಳಬೇಕು. ನಾನು ಅದೃಷ್ಟಶಾಲಿ" ಎಂದಿತು.

ಹಿರಣ್ಯಕ ಇಲಿ ಜಿಂಕೆಯೊಂದಿಗೆ, "ಮಿತ್ರಾ, ಇಷ್ಟೊಂದು ವಿವೇಕಶಾಲಿಯಾದ ನೀನು ಈ ಉರುಳಿನೊಳಗೆ ಹೇಗೆ ಬಿದ್ದೆ?" ಎಂದು ಕೇಳಿತು.

"ನಾನು ಉರುಳಿನಲ್ಲಿ ಸಿಕ್ಕಿಬೀಳುವುದು ಇದೇನೂ ಮೊದಲನೇ ಸಾರಿಯಲ್ಲ. ಈ ಮೊದಲೊಂದು ಸಾರಿ ಹೀಗೆಯೇ ಸಿಕ್ಕಿಬಿದ್ದು, ಕಡೆಗೆ ತಪ್ಪಿಸಿಕೊಂಡೆ." ಎಂದಿತು ಜಿಂಕೆ.

ಆ ಕಥೆಯನ್ನು ಹೇಳುವಂತೆ ಇಲಿ ಕೇಳಿತು. "ಇದು ಕಥೆ ಹೇಳುವ ಸಮಯವಲ್ಲ, ಉರುಳು ಹಾಕಿಟ್ಟ ಬೇಟೆಗಾರ ಯಾವ ಕ್ಷಣಕ್ಕೂ ಬಂದುಬಿಡುವನು. ಮೊದಲು ಬಿಡಿಸಿಬಿಡು" ಎಂದಿತು ಜಿಂಕೆ.

ಇಲಿ ನಗಾಡುತ್ತ "ನಾನು ಸಮೀಪದಲ್ಲಿರುವಾಗ ನಿನಗೆ ಬೇಟೆಗಾರನ ಭಯವೇ ಬೇಡ. ಅವನು ಕಣ್ಣು ಮುಚ್ಚಿಬಿಡಿಸುವುದರೊಳಗೆ ನಾನು ಹಗ್ಗವನ್ನು ತುಂಡರಿಸಬಲ್ಲೆ. ನನಗೆ ಒಂದಿಷ್ಟಾದರೂ ಶಾಸ್ತ್ರ ಅರ್ಥಗಳೇನೆಂದು ಗೊತ್ತು. ನೀನೂ ನನ್ನಂಥವನೇ. ಆದುದರಿಂದಲೇ ಕೇಳಿದೆ. ನೀನು ಬೇಡನ ಗೊಡವೆ ಬಿಟ್ಟು ಹೇಳುತ್ತಾ ಇರು" ಎಂದಿತು.

"ವಿಧಿ ಅಟ್ಟಿಸಿಕೊಂಡು ಬರುವಾಗ ಎಷ್ಟು ವಿವೇಕವಿದ್ದರೂ ಉಪಯೋಗವಿಲ್ಲಪ್ಪಾ, ಎಂತೆಂಥಾ ದಪ್ಪದ ಗ್ರಂಥಗಳನ್ನು ಬರೆಯುವವರು ಕೂಡಾ ತಮ್ಮ ಹಣೆ ಬರೆಹದ ಒಂದಕ್ಷರ ಕೂಡಾ ಅಳಿಸಲು ಸಮರ್ಥರಲ್ಲ." ಎಂದು ಚಿತ್ರಾಂಗವು ತನ್ನ ಹಳೆಯ ಅನುಭವವನ್ನು ಹೇಳಿತು :

"ತುಂಬ ದಿನಗಳ ಹಿಂದೆ, ನಾನು ಆರು ತಿಂಗಳ ಕಂದನಾಗಿದ್ದಾಗ, ನಮ್ಮ ಗುಂಪನ್ನು ಬಿಟ್ಟು ಓಡುತ್ತಿದ್ದೆ. ದೊಡ್ಡ ಜಿಂಕೆಗಳೆಲ್ಲ ಓಡುತ್ತೋಡುತ್ತಾ, ಏನಾದರೂ ಅಪಾಯ ಅಡ್ಡ ಬಂದರೆ ಅವುಗಳ ಮೇಲಿಂದ ಹಾರಿ ಓಡಬಲ್ಲವು.

ಒಂದು ದಿನ ನಾನು ಮಂದೆಯೊಂದಿಗೆ ಸಾಗುತ್ತಿರುವಾಗ, ನಮ್ಮ ದಾರಿಗೆ ಅಡ್ಡವಾಗಿ ಯಾವ ಬೇಟೆಗಾರರೋ ಉರುಳು ಹಾಕಿಟ್ಟಿದ್ದರು. ದೊಡ್ಡ ಜಿಂಕೆಗಳು ಅದರ ಮೇಲೆ ಹಾರಿ ಹಾರಿ ಓಡಿಬಿಟ್ಟುವು. ಆದರೆ ನನಗೆ ಹಾರಲಿಕ್ಕೆ ಬಾರದು.

ಆದುದರಿಂದ ಓಡುತ್ತಾ ಹೋಗಿ ಆ ಉರುಳಿನಲ್ಲಿ ಸಿಕ್ಕಿಕೊಂಡೆ. ಓಡಲಾಗದೆ ಡಮ್ಮನೆ ಬಿದ್ದೆ.

ಬೇಟೆಗಾರ ಬಹಳ ಸಂತೋಷದಿಂದ ಓಡುತ್ತಾ ಬಂದು ನನ್ನ ಕಾಲುಗಳನ್ನು ಹಿಡಿದು ಕಟ್ಟಿದ. ಹೀಗೆ ನಾನು ಬೇಟೆಗಾರನಿಗೆ ಸಿಕ್ಕಿಹೋದುದನ್ನು ನೋಡಿ, ಉಳಿದ ಜಿಂಕೆಗಳು ಏನೂ ಮಾಡಲಾಗದೆ ಓಡಿ ಹೋದುವು.

ಆದರೆ ಆ ಬೇಟೆಗಾರ ನನ್ನನ್ನು ಕೊಲ್ಲಲಿಲ್ಲ. ನಾನು ಬಹಳ ಸುಂದರವಾಗಿದ್ದುದರಿಂದ ನನ್ನನ್ನು ಕೊಲ್ಲುವುದಕ್ಕಿಂತ ಯಾರಿಗಾದರೂ ಬೆಳೆಸಿಕೊಳ್ಳಲು ಕೊಟ್ಟರೆ ಹೆಚ್ಚು ಲಾಭ ಬರುತ್ತದೆಂದುಕೊಂಡ. ಅಂತೆಯೇ ಅವನು ನನ್ನನ್ನು ಮನೆಗೆ ತೆಗೆದುಕೊಂಡು ಹೋಗಿ ಮಿಾಯಿಸಿ, ಅಲಂಕಾರ ಮಾಡಿ, ಎತ್ತಿಕೊಂಡು ಹೋಗಿ ಒಬ್ಬ ರಾಜನಿಗೆ ಮಾರಿದ.

ರಾಜನು ನನ್ನನ್ನು ಬಹಳ ಚೆನ್ನಾಗಿ ನೋಡಿಕೊಂಡ. ಅಲ್ಲಿಯ ಹೆಂಗುಸರು ನನ್ನನ್ನು ತುಂಬ ಪ್ರೀತಿಯಿಂದ ಮುದ್ದಿಸುತ್ತ ಮಾಡುತ್ತ ತುಂಬಾ ಶ್ರಮಕೊಟ್ಟರು.

ಅಷ್ಟರಲ್ಲಿ ಮಳೆಗಾಲ ಬಂತು. ಗುಡುಗುಮಿಂಚುಗಳು ಕೂಡಿದ ಮೋಡಗಳ ಆಕಾಶ ನೋಡಿದ ಕೂಡಲೇ ನನಗೆ ಅರಣ್ಯದ ನೆನಪು ಬಂದಿತು. ನನ್ನ ಪರಿವಾರದೊಂದಿಗೆ ಕೂಡಬೇಕೆನಿಸಿತು. ಅದೇ ಚಿಂತೆಯಲ್ಲಿ ನಾನು 'ನನ್ನವರ ಬಳಿಗೆ ಯಾವಾಗ ಹೋದೇನು? ಕಾಡಿನಿಂದ ಕಾಡಿಗೆ ಓಡುತ್ತಾ ಯಾವಾಗ ತಿರಿಗೇನು?' ಎಂದು ಹೇಳಿಕೊಂಡು ಅತ್ತು ಕೂಗಿದೆ.

ನನ್ನ ಮಾತುಗಳನ್ನು ಕೇಳಿ ಅಲ್ಲಿದ್ದವರು ಆಶ್ಚರ್ಯಪಟ್ಟು ನನಗೆ ದೆವ್ವ ಹಿಡಿದುಕೊಂಡಿತೆಂದುಕೊಂಡರು. ಅದಕ್ಕಾಗಿ ರಾಜನು ಭೂತವೈದ್ಯನನ್ನು ಬರಮಾಡಿದ. ಅವನು ಮಂತ್ರ ಹೇಳುತ್ತ ಕೋಲಿನಿಂದ ನನ್ನನ್ನು ಹೊಡೆಯತೊಡಗಿದ. ಆಗ ಒಬ್ಬ ಸಾಧು ಬಂದು ಅವರನ್ನು ನಿಂದಿಸುತ್ತ 'ಇದಕ್ಕೆ ಹಿಂಸೆ ಕೊಡುವುದು ಅನ್ಯಾಯ. ಇದು ಮಾಡಬಾರದ ಕೆಲಸವೇನು ಮಾಡಿತು?' ಎಂದು ಕೇಳಿದ.

ನಾನು ಹೇಳಿದ ಮಾತುಗಳನ್ನು ಅವರು ಸಾಧುವಿಗೆ ಹೇಳಿದರು. ಅದಕ್ಕೆ ಸಾಧು, 'ಪಾಪ, ಈ ದುರ್ದೈವೀ ಜಿಂಕೆ ತನ್ನ ಸ್ವಾತಂತ್ರ್ಯಕ್ಕಾಗಿಯೂ, ತನ್ನ ಹಳೆಯ ಜನ್ಮಸ್ಥಳದಲ್ಲಿ ವಿಹರಿಸಲಿಕ್ಕಾಗಿಯೂ ಗೋಳಾಡುವುದಕ್ಕಿಂತಲೂ ಹೆಚ್ಚಿನ ಸ್ವಾಭಾವಿಕ ಬೇರೇನಿದೆ? ನಿಮ್ಮದು ವಿಪರೀತಾರ್ಥ. ಅದನ್ನು ಸ್ವೇಚ್ಛೆಯಾಗಿ ಬಿಟ್ಟು ಪುಣ್ಯಕಟ್ಟಿಕೊಳ್ಳಿ' ಎಂದನು.

ರಾಜನು ನನ್ನನ್ನು ಶುಭ್ರವಾಗಿ ಮಿಾಯಿಸಿ, ಏಟಿನಿಂದ ಉಂಟಾದ ಗಾಯಗಳಿಗೆ ಔಷಧ ಹಾಕಿಸಿ, ನನಗೆ ಸ್ವೇಚ್ಛೆಕೊಟ್ಟು ಕಳುಹಿಸಿದ."



# ೧೮೨. ಮೊದಲನೇ ಕ್ರೈಸ್ತವ ಚಕ್ರವರ್ತಿ

ನೀರೋನಂತಹ ರೋಮನ್ ಚಕ್ರವರ್ತಿ ಕ್ರೈಸ್ತವರನ್ನು ಸಿಂಹಗಳ ಬಾಯಿಗೆ ಹಾಕಿದರೆ, ಕಾನ್‌ಸ್ಟಾಂಟೈನ್ ಎಂಬ ರೋಮನ್ ಚಕ್ರವರ್ತಿ ರೋಮ್ ಸಾಮ್ರಾಜ್ಯಕ್ಕೆ ಕ್ರೈಸ್ತವಮತವನ್ನು ಕೊಡಿಸಿದನು. ಇವನ ಪೂರ್ತಿ ವಿಗ್ರಹವು ಮೊದಲನೇ ರೋಮನ್ ಫೋರಮ್‌ನಲ್ಲಿ ಇದ್ದಿತು. ಅದರ ತಲೆ ಈ ಚಿತ್ರದಲ್ಲಿದೆ.






# ಅಂತರಾರ್ಥ

ಹಟದಿಂದ ಗಟ್ಟಿಕಟ್ಟಿಹೋದ ಬಂಡೆಗುಂಡಿಗೆಯವನಾದ ರಾಜಾ ತ್ರಿವಿಕ್ರಮನು ಮರದ ಬಳಿಗೆ ಹಿಂದಿರುಗಿ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಬೇತಾಳವು "ರಾಜನೇ, ನಿನ್ನಂತಹ ಪ್ರಾಜ್ಞರಾಗಿರುವವರು ಪರಿಸ್ಥಿತಿಗಳಿಗೆ ಅಡಿಯಾಳಾಗಿ ಹೋಗುವುದೆಂದರೆ ಆಶ್ಚರ್ಯವಾಗುತ್ತದೆ. ಅನಾಗರಿಕನೊಬ್ಬ ತನಗೆ ಲಭಿಸಿದ ಅದ್ಭುತವಾದ ಅವಕಾಶಗಳನ್ನು ಕೂಡಾ ವಿನಿಯೋಗಿಸಿಕೊಳ್ಳಲಾರದೆ ಹೋಗುತ್ತಾನೆಂದರೆ ಏನು ಹೇಳಲಿ? ಇದಕ್ಕೆ ನಿದರ್ಶನವಾದ ಕಥೆಯೊಂದನ್ನು ಹೇಳುತ್ತೇನೆ, ಕೇಳು, ದಾರಿಯ ಶ್ರಮ ತಿಳಿಯಲಾರದು" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು:

ಹಿಂದೆ ಒಂದು ಕಾಲದಲ್ಲಿ ಕಾಮರೂಪ ದೇಶವನ್ನು ಮಲಯ ಸೇನರಾಜನು ಪಾಲಿಸಿಕೊಂಡಿದ್ದನು. ಅವನಿಗೆ ಸಂತಾನವಾಗಲಿಲ್ಲ. ಈ ಸ್ಥಿತಿಯಲ್ಲೇ ರಾಜನಿಗೆ ವೃದ್ಧಾಪ್ಯವೂ ಸಮೀಪಿಸಿತು. ಅವನಿಗೆ ವಾರಸ ಹಕ್ಕಿನವರು ಯಾರೂ ಇಲ್ಲದಿದ್ದುದರಿಂದ ರಾಜ್ಯವನ್ನು

## ಬೇತಾಳ ಕಥೆಗಳು?...



ಕೈವಶಪಡಿಸಿಕೊಳ್ಳಲು ಅನೇಕರು ಹೊಂಚುಹಾಕಿಕೊಂಡಿದ್ದರು. ಅನೇಕ ಸಾರಿ ಅವನನ್ನು ಕೊಲೆ ಮಾಡುವ ಪ್ರಯತ್ನಗಳೂ ನಡೆದುವು. ದೈವಿಕವಾಗಿಯೇ ಅವೆಲ್ಲಾ ತಪ್ಪಿ ಹೋದುವೆನ್ನಬೇಕು. ಇಂತಹ ದುಷ್ಟತನಗಳಿಗೆ ಯಾರು ತಲೆ ಹಾಕಿದರೆಂದು ತಿಳಿದುಕೊಳ್ಳಲು ಕೂಡಾ ಸೇನಾನಿಗೆ ಸಾಧ್ಯವಾಗಲಿಲ್ಲ.

ಹೀಗಿರಲು ಮೂಡು ದಿಕ್ಕಿನ ಅರಣ್ಯದಲ್ಲಿ ಒಂದು ಬಿಳೀ ಬಣ್ಣದ ಹುಲಿ ಸೇರಿಕೊಂಡು ಪ್ರಯಾಣಿಕರನ್ನು ಕೊಲ್ಲುತ್ತಿರುವುದಾಗಿ ಮಲಯಕೇತುವಿಗೆ ಗೊತ್ತಾಯಿತು. ಕೂಡಲೇ ಅವನು ಆ ಹುಲಿಯನ್ನು ಬೇಟೆಯಾಡಿ ಕೊಲ್ಲಬೇಕೆಂದು ಕಾಡಿಗೆ ಹೋದನು. ಕಾಡಿನೊಳಗೆ ಎಷ್ಟು ಹುಡುಕಿದರೂ ಆ ಹುಲಿಯ ಜಾಡು ಕಾಣಲಿಲ್ಲ. ಆದರೆ ರಾಜನೊಂದಿಗಿದ್ದ ಇಬ್ಬರು ಅಂಗರಕ್ಷಕರು ಒಮ್ಮೆಲೇ ಕತ್ತಿ ಹಿರಿದು ರಾಜನ ಮೇಲೆ ಮುಗಿಬಿದ್ದರು. ರಾಜನು ಕೂಡಾ ಕತ್ತಿ ಹಿರಿದು ಆ ಘಾತಕರ ಮೇಲೆ ಬಿದ್ದನು. ಆದರೆ ವೃದ್ಧಾಪ್ಯಕ್ಕೆ ಕಾಲಿಟ್ಟ ಮಲಯಸೇನನಿಂದ ಇಬ್ಬರೊಂದಿಗೆ ಒಂದೇ ಸಾರಿ ಯುದ್ಧ ಮಾಡಲು ಸಾಧ್ಯವಾಗದೆ ಹೇಗೋ ಆತ್ಮರಕ್ಷಣೆ ಮಾಡಿಕೊಳ್ಳುತ್ತಿದ್ದನು.

ರಾಜನು ತನ್ನ ಅಂಗರಕ್ಷಕರ ಕತ್ತಿಗಳಿಗೆ ಬಲಿಯಾಗುವುದರಲ್ಲಿರುವಾಗ ಎಲ್ಲಿಂದಲೋ ಒಬ್ಬ ಆಟವಿಕ ಯುವಕನು ಬಂದು ತನ್ನ ಈಟಿಯಿಂದ ಒಬ್ಬನನ್ನು ಕೊಂದನು. ಆಮೇಲೆ ರಾಜನೊಂದಿಗೆ ಕೂಡಿ ಹೋರಾಡಿ ಎರಡನೇ ಯುವಕನನ್ನು ಕೊಂದು ರಾಜನ ಪ್ರಾಣವನ್ನು ಕಾಪಾಡಿದನು.

ಆ ಯುವಕನು ಆಟವಿಕ ನಾಯಕನ ಮಗನಾದ ವೀರನೆಂಬವನು. ಇವನ ತಂದೆ ಆಟವಿಕರ ನಾಯಕನಷ್ಟೇ ಅಲ್ಲದೆ, ಅಡವಿಯಲ್ಲಿರುವ ಕೊಳ್ಳೆಗಾರರ ಗುಂಪಿಗೂ ನಾಯಕನಾಗಿದ್ದ.

ವೀರನು ರಾಜನ ಗುರುತು ಹಿಡಿದು ರಾಜಭಕ್ತಿಯಿಂದ ಅವನನ್ನು ರಕ್ಷಿಸಿದ್ದಲ್ಲ; ಇಬ್ಬರು ಗಟ್ಟಿಮುಟ್ಟಾದ ಬಂಟರು ವೃದ್ಧನೊಬ್ಬನನ್ನು ಕೊಲ್ಲುವ ಪ್ರಯತ್ನದಲ್ಲಿರುವುದನ್ನು ನೋಡಿ ಸಹಿಸದೆ ಅವನಿಗೆ ತುಂಬ ಕೋಪ ಬಂದಿತ್ತು.

ಈ ಸಂಗತಿಯನ್ನು ತಿಳಿಯದ ಮಲಯಸೇನನು ವೀರನಿಗೆ ತನ್ನ ಕೃತಜ್ಞತೆಯನ್ನು ಹೇಳಿ, ತನ್ನೊಂದಿಗೆ ರಾಜಧಾನಿಗೆ ಬರುವಂತೆಯೂ ಕರೆದನು. ರಾಜಧಾನಿ ಎಂದರೆ ಹೇಗಿರುತ್ತದೋ ನೋಡಬೇಕೆಂಬ ಕುತೂಹಲದಿಂದ ವೀರನು ಅದಕ್ಕೆ ಒಪ್ಪಿದನು.

ರಾಜಭವನವನ್ನು ತಲಪಿದ ಮೇಲೆ ಮಲಯಸೇನನು ವೀರನೊಂದಿಗೆ ತನ್ನ ಮೇಲೆ ಅನೇಕ ಬಾರಿ ಹತ್ಯಾ ಪ್ರಯತ್ನ ನಡೆದಿದೆಯೆಂದೂ, ಇವುಗಳನ್ನು ಮಾಡಿಸುವವರು ಯಾರೆಂಬುದು ತನಗೆ ಗೊತ್ತಾಗಲಿಲ್ಲವೆಂದೂ ಹೇಳಿದನು.

ಆಮೇಲೆ ವೀರನನ್ನು ತನ್ನ ಜತೆಯಲ್ಲೇ ಭೋಜನಕ್ಕೆ ಕೂಡಿಸಿಕೊಂಡನು. ಮಾತಾಡುತ್ತಾ ರಾಜನು ಎರಡು ತುತ್ತುಗಳನ್ನು ಬಾಯಿಗಿಟ್ಟು ಗಂಟಲು

ಕಟ್ಟಿ ಕಣ್ಣು ತೇಲಬಿಟ್ಟು ದಢೀರನೆ ಬಿದ್ದುಬಿಟ್ಟವನು ಮತ್ತೆ ಏಳಲೇ ಇಲ್ಲ. ಅವನ ಊಟದಲ್ಲಿ ಯಾರೋ ವಿಷಹಾಕಿದ್ದರು.

ರಾಜವೈದ್ಯರು ಬಂದು, ಮಾಡುವುದನ್ನು ಮಾಡಿ, ನೋಡುವುದನ್ನು ನೋಡಿ, ಸಾಯುವುದಕ್ಕೆ ಮೊದಲು ರಾಜನು ಎರಡುಮಾತು ಹೇಳುವಂತೆ ಮಾಡಲು ಮಾತ್ರ ಶಕ್ತರಾದರು. ಪ್ರಧಾನ ಮಂತ್ರಿಯೊಂದಿಗೆ ಹೇಳಿದ ಆ ದುರದೃಷ್ಟ ರಾಜನ ಕಡೆಯ ಮಾತು "ನನ್ನ ಅನಂತರ ವೀರನೇ ವಾರಸುದಾರನು. ಅವನಿಗೇ ರಾಜ್ಯಾಭಿಷೇಕ ಮಾಡಿ."

ಕೆಲವು ಗಳಿಗೆಗಳಲ್ಲೇ ನಡೆದ ಈ ವಿಪರೀತ ಗಳನ್ನು ನೋಡಿ ವೀರನಿಗೆ ಒಂದೂ ತೋರಲಿಲ್ಲ. ಅವನಿಗೆ ಆ ಕ್ಷಣವೇ ಅಲ್ಲಿಂದ ಹೊರಟುಹೋಗ ಬೇಕೆಂದು ತೋರಿದರೂ, ರಾಜನಿಗೆ ವಿಷವಿಕ್ಕಿ ಕೊಂದ ವರು ಯಾರೆಂದು ತಿಳಿಯದೆ ಹೋಗಬಾರದೆನಿಸಿತು.

ಅಂತೂ ವೀರನೇ ರಾಜನಾಗಿ ಅಭಿಷೇಕಿಸಲ್ಪಟ್ಟನು. ರಾಜನಾದ ಮೇಲೆ ವೀರನನ್ನು ಕೂಡಾ ಕೊಲ್ಲಲು ಕೆಲವು ಪ್ರಯತ್ನಗಳು ನಡೆದುದು ಅವನಿಗೇ ಗೊತ್ತಾಯಿತು. ಅದೃಷ್ಟವಶದಿಂದ ವೀರನು ಅವು ಗಳಿಂದ ತಪ್ಪಿಸಿಕೊಂಡನು.

ಇದೇ ಸಮಯದಲ್ಲಿ ರಾಜ್ಯದಲ್ಲಿ ಡಕಾಯಿತರ ದಾಳಿಗಳು ಹೆಚ್ಚುತ್ತಾ ಬಂದವು. ಆ ಕಳ್ಳರೆಲ್ಲ ತನ್ನ ಕಡೆಯ ಗುಂಪಿನವರೆಂಬ ಸಂಗತಿ ವೀರನಿಗೆ ಗೊತ್ತಿತ್ತು. ಆದುದರಿಂದ ಅವನು ಆ ಕಳ್ಳರನ್ನು ಹಿಡಿಯುವ ವಿಷಯದಲ್ಲಿ ಅಷ್ಟೊಂದು ಶ್ರದ್ಧೆ ವಹಿಸುತ್ತಿರಲಿಲ್ಲ.

ಆದರೆ ಸೇನಾಧಿಪತಿ ಸುಮ್ಮನಿರದೆ ಆ ಡಕಾಯಿತ ರನ್ನು ಹಿಡಿಯಲು ಪ್ರಯತ್ನ ಪಡುತ್ತಲೇ ಇದ್ದನು. ಒಂದು ದಿನ ಸೇನಾಧಿಪತಿ ವೀರನಬಳಿಗೆ ಬಂದು, "ಮಹಾರಾಜರೆ, ಡಕಾಯಿತರ ನಾಯಕನೆನಿಸುವ ಒಬ್ಬ ಸಿಕ್ಕಿದ್ದಾನೆ. ತಮ್ಮ ಅಪ್ಪಣೆಯಾದರೆ ಅವನಿಗೆ ಮರಣದಂಡನೆ ನೆರವೇರಿಸಿ ಬಿಡುತ್ತೇನೆ" ಎಂದನು.



ತಾನು ಅರಣ್ಯದಿಂದ ಹೊರಟುಬಂದ ಮೇಲೆ ತನ್ನ ಗುಂಪಿನ ಕಳ್ಳರಿಗೆ ಯಾರು ನಾಯಕನಾಗಿದ್ದಾ ನೆಂದು ನೋಡಲಿಕ್ಕಾಗಿ, ವೀರನು ಸೇನಾಧಿಪತಿ ಯೊಂದಿಗೆ ಸೆರೆಮನೆಗೆ ಹೋದನು. ಅಲ್ಲಿ ಸಿಕ್ಕಿ ಬಿದ್ದವನು ವೀರನ ಬಲಭುಜದಂತಿದ್ದವನೇ. ರಾಜ ನಾಗಿದ್ದ ವೀರನನ್ನು ನೋಡಿದ ಕೂಡಲೇ ಆ ಕಳ್ಳನ ಕಣ್ಣುಗಳು ಆನಂದದಿಂದಲೂ, ಆಶೆಯಿಂದಲೂ ಹೊಳೆದುವು. ಅವನು ಏನೋ ಹೇಳಲು ಹೋಗಿ ತುಟಿ ತೆರೆದನೇ ಹೊರತು, ಏನೂ ಹೇಳದೆ ಬಾಯಿ ಮುಚ್ಚಿಕೊಂಡನು. ವೀರನೂಸಹ ಅವನೊಡನೆ ಏನೂ ಮಾತಾಡದೆ ತಟಕ್ಕನೆ ಹಿಂದಿರುಗಿ ಅಲ್ಲಿಂದ ಹೊರಟುಬಿಟ್ಟನು.

ತನ್ನ ವಿಶ್ವಾಸದ ಅನುಚರನನ್ನು ಸೆರೆಮನೆಯಲ್ಲಿ ನೋಡಿದ ಮೇಲೆ ವೀರನ ಮನಸ್ಸು ಬಹಳ ಗಲಿಬಿಲಿ ಗೊಳಗಾಯಿತು. ಆ ರಾತ್ರಿ ಅವನಿಗೆ ನಿದ್ದೆಯೇ ಬರಲಿಲ್ಲ. ಆಲೋಚಿಸುತ್ತಾ ಕಡೆಗೆ ಒಂದು ನಿರ್ಧಾ

ರಕ್ಕೆ ಬಂದನು. ಅವನು ಮಧ್ಯರಾತ್ರಿ ಕಳೆದ ಮೇಲೆ ಸೆರೆಮನೆಗೆ ಹೋಗಿ, ತನ್ನ ಅನುಚರನನ್ನು ಸೆರೆಯಿಂದ ಬಿಡುಗಡೆ ಮಾಡಿ, ಅವನನ್ನು ಕರೆದುಕೊಂಡು ಸೀದಾ ಅರಣ್ಯಕ್ಕೇ ಹೋಗಿಬಿಟ್ಟನು. ಆಮೇಲೆ ಅವನು ರಾಜಧಾನಿಯ ಕಡೆಗೆ ತಿರುಗಿ ಸಹಾ ನೋಡಲಿಲ್ಲ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವೀರನು ರಾಜನಾಗಿ ಸುಖದಿಂದಿರುವುದನ್ನುಬಿಟ್ಟು, ಅದನ್ನು ತ್ಯಜಿಸಿ ಕಾಡಿಗೇ ಹೋದನೇಕೆ? ತನ್ನನ್ನು ಕೊಲ್ಲುವ ಪ್ರಯತ್ನಗಳು ನಡೆಯುವುದನ್ನು ನೋಡಿ ಹೆದರಿದನೆ? ಅಥವಾ ತನಗೆ ರಾಜ್ಯವಾಳುವ ಅರ್ಹತೆ ಇಲ್ಲವೆಂದು ಭಾವಿಸಿದನೆ? ರಾಜನನ್ನುಕೊಲ್ಲುವ ಪ್ರಯತ್ನದಲ್ಲಿರುವವರು ಯಾರೆಂದು ತಿಳಿಯುವ ಪ್ರಯತ್ನ ಮಾಡಬೇಕೆಂದು ಮೊದಲು ನಿಶ್ಚಯಿಸಿದವನ ನಿಶ್ಚಯ ಏಕೆ ಕಮರಿ ಹೋಯಿತು? ತನ್ನ ಅನುಚರನನ್ನು ಸೆರೆಮನೆಯಲ್ಲಿ ನೋಡಿ ಏಕೆ ತಳಮಳಿಸಿದನು? ರಾಜನಾಗಿರುವವನಿಗೆ ಅವನನ್ನು ಬಿಡುಗಡೆಗೊಳಿಸುವ ಅಧಿಕಾರವೂ ಇದೆಯಲ್ಲವೆ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆಯೊಡೆದು ಪುಡಿಯಾಗುತ್ತದೆ." ಎಂದಿತು.

ಅದಕ್ಕೆ ತ್ರಿವಿಕ್ರಮ ಹೀಗೆಂದನು: "ವೀರನಿಗೆ ಹತ್ಯಾಪ್ರಯತ್ನಗಳನ್ನು ನೋಡಿ ಭಯವಾಯಿತೆಂದು ಹೇಳಲು ಸಾಧ್ಯವಿಲ್ಲ. ಹಾಗಿರುತ್ತಿದ್ದರೆ, ತನ್ನ ಮೇಲೆ ಮೊದಲನೇಸಾರಿ ಹತ್ಯಾಪ್ರಯತ್ನ ನಡೆದಾಗಲೇ ಓಡಿಬಿಡುತ್ತಿದ್ದ. ಅವನ ಪರಿವರ್ತನೆಗೆ ಒಂದೇ ಒಂದು ಕಾರಣವೆಂದರೆ ಅವನ ಅನುಚರನು ಸೆರೆಮನೆಯಲ್ಲಿ ಸಿಕ್ಕಿಬಿದ್ದುದೇ. ಅವನನ್ನು ಸೆರೆಮನೆಯಲ್ಲಿಡಿಸಿ ಶಿಕ್ಷಿಸುವಂತಹ ಸಂಸ್ಕಾರದಲ್ಲಿ ತಾನಿರುವೆನೆಂದು ಆಗ ತಾನೇ ಅವನಿಗೆ ತಿಳಿಯಿತು. ಸೇನಾಧಿಪತಿ ಹಿಡಿದ ಈ ಒಬ್ಬನನ್ನು ತಾನು ಬಿಡುಗಡೆ ಮಾಡಿ ಬಿಡಬಹುದಾದರೂ ಆಮೇಲೆ ತಾನು ರಾಜನಾಗಿರಲು ಅನರ್ಹನಾಗುವೆನೆಂದು ಅವನಿಗೆ ತೋರಿತು. ಅಷ್ಟೇ ಅಲ್ಲ, ತಾನು ಕೂಡಾ ಡಕಾಯಿತನೇ ಎಂದು ಎಲ್ಲರಿಗೂ ತಿಳಿದು ಹೋಗುವುದೂ ನಿಜವೆನಿಸಿತು. ಆಗಾಗ ಹತ್ಯಾ ಪ್ರಯತ್ನಗಳಿಗೆ ಗುರಿಯಾಗುವಂತಹ ರಾಜತ್ವದ ಮೇಲೆ ಅವನಿಗೆ ಅಸಹ್ಯ ಹುಟ್ಟಿದ ಮೇಲೆ ಅದನ್ನು ಮಾಡುವವರು ಯಾರೆಂಬುದನ್ನು ತಿಳಿಯುವ ಆತುರವೂ ಅಡಗಿಬಿಟ್ಟಿತು. ಆದುದರಿಂದ ಸ್ವಲ್ಪವೂ ಆತ್ಮೀಯತೆಗೆ ತಾವಿಲ್ಲದ ರಾಜಸಂಸ್ಕಾರಕ್ಕೆ ಕೈಮುಗಿದು ಆತ್ಮೀಯತೆಯೇ ಪ್ರಧಾನವಾಗಿರುವ ಅರಣ್ಯ ಜೀವಿತಕ್ಕೇ ಹಿಂದಿರುಗಿಬಿಟ್ಟನು."

ಹೀಗೆ ರಾಜನಿಗೆ ಮೌನಭಂಗವಾದುದೇ ತಡ, ಬೇತಾಳವು ಶವಸಮೇತ ಮಾಯವಾಗಿ, ಮೊದಲಿನಂತೆ ಮರದ ಕೊಂಬೆಯಲ್ಲಿ ನೇತಾಡ ತೊಡಗಿತು.





# ವಿದ್ಯಾಪ್ರಸಾರ

ಕಮಲಪುರವೆಂಬ ಗ್ರಾಮದಲ್ಲಿ ಹುಟ್ಟಿ ಬೆಳೆದ ಮುರಾರಿ ಪಟ್ಟಣದಲ್ಲಿ ನ್ಯಾಯಶಾಸ್ತ್ರ ಕಲಿಯುತ್ತಿದ್ದನು. ಒಂದು ಸಾರಿ ಊರಿಗೆ ಬಂದಿದ್ದ ಮುರಾರಿ, ಬೆಳಿಗ್ಗೆ ಎದ್ದು ಮಾವಿನಮರದ ಬುಡದಲ್ಲಿ ಹಲ್ಲುಜ್ಜಿ ಮುಖ ತೊಳೆಯುತ್ತಿರುವಾಗ, ನಡು ವಯಸ್ಸು ಮೀರಿದ ತ್ರಿಲೋಚನನೆಂಬ ಗ್ರಾಮಸ್ಥನೊಬ್ಬ ಅವಸರವಸರವಾಗಿ ಬಂದು, ಆಯಾಸದಿಂದ ಉಸಿರು ಬಿಡುತ್ತಾ ಮುರಾರಿಯ ಮುಂದೆ ನಿಂತ.

"ಏನಾಯಿತು ಮಾವಯ್ಯ ಇಷ್ಟೊಂದು ಗಡಿಬಿಡಿಯಿಂದ ಓಡಿಬಂದಿರಲ್ಲ ?" ಎಂದು ಕೇಳಿದ ಮುರಾರಿ. ತ್ರಿಲೋಚನನು ಟಕ್ಕನೆ ಅಲ್ಲೇ ಕುಳಿತು ಹಣೆಯ ಮೇಲೆ ಅಂಗೈಯಿಂದ ಬಡಿದುಕೊಳ್ಳುತ್ತ "ನನ್ನದೆಲ್ಲಾ ಮುಳುಗಿತಪ್ಪಾ" ಎಂದ.

"ಕಳ್ಳತನವಾಯಿತೆ ರಾತ್ರಿಯಲ್ಲಿ ? ಯಾರಾದರೂ ಸುಲಿದುಕೊಂಡರೆ ?" ಎಂದು ಕೇಳಿದ ಮುರಾರಿ.

"ಸುಲಿಗೆಯೇ ! ದೊಡ್ಡ ಸುಲಿಗೆ ! ಸುಲಿಗೆ ಮಾಡಿದವ ಹತ್ತಿರದಲ್ಲೇ ಇರುವ ದೊಡ್ಡ ಮನುಷ್ಯ ಕಿಶೋರಿಠಾಕುರ" ಎಂದ ತ್ರಿಲೋಚನ. ಏನು ನಡೆಯಿತೋ ಸರಿಯಾಗಿ ಹೇಳುವಂತೆ ಮುರಾರಿ ಕೇಳಲು, ತ್ರಿಲೋಚನ ತನ್ನನ್ನು ಸುಧಾರಿಸಿಕೊಂಡು ಹೀಗೆ ಹೇಳಿದ :

"ಕಳೆದ ವರ್ಷ ಆ ಕಿಶೋರಿ ಠಾಕುರನ ಹತ್ತಿರ ಇನ್ನೂರು ರೂಪಾಯಿಯ ಸಾಲ ತೆಗೆದಿದ್ದೆ. ಯಾವುದೋ ಕಾಗದದ ಮೇಲೆ ನನ್ನ ಕೈಬೆರಳ ಮುದ್ರೆಯೊಂದನ್ನು ಹಾಕಿಸಿಕೊಂಡಿದ್ದ. ನನಗೆ ಓದುಬರಹ ಬಾರದಷ್ಟೇ. ಅದರಲ್ಲಿ ಏನು ಬರೆದಿದ್ದನೋ ನಾನರಿಯೆ. ಅಲ್ಪ ಇನ್ನೂರು ರೂಪಾಯಿಗೆ ನಾನು ನನ್ನ ಒಂದು ಎಕರೆ ಹೊಲವನ್ನೆಲ್ಲ ಅವನಿಗೆ ಅಡವಿಟ್ಟಿದ್ದೆನಂತೆ. ಅದನ್ನು ಸ್ವಾಧೀನ ಮಾಡಿಕೊಳ್ಳುತ್ತೇನೆ ಅಂತ ಹೇಳಿ ಇಬ್ಬರು ಆಳುಗಳೊಂದಿಗೆ ಬಂದು ಪತ್ರವನ್ನೆಲ್ಲ ತೋರಿಸಿ ಭಾರೀ ಗಲಾಟೆ ಮಾಡಿದ. ಅದರಲ್ಲಿ ಸಾಕ್ಷಿ ಹಾಕಿದವರೆಲ್ಲ ಅವನ ಕಡೆಯವರೇ. ನನಗೊಂದೂ ತೋರುವುದಿಲಪ್ಪ !"

"ಹಾಗೇನು ? ನೀವೇನೂ ಚಿಂತಿಸಬೇಡಿ. ಆತ ಕೋರ್ಟಿಗೆ ಹೋಗಲಿ. ಅವನ ಕೇಸು ಬಿದ್ದುಹೋಗಿ ಶಿಕ್ಷೆ ಕೂಡಾ ಆಗುತ್ತೆ. ಆದರೆ ಅಷ್ಟರವರೆಗೆ ನಿಮಗೆ ಶರೀರಾಯಾಸವೂ, ಕಾಲಯಾಪನೆಯೂ ಬಂದೀತು. ಸಹಿಸಿಕೊಳ್ಳಿ. ಇದು ನಿಮಗೊಬ್ಬರಿಗೇ ಸಂಬಂಧಿಸಿದ

ಎ. ಸಿ. ಸರ್ಕಾರ್, ಐಂದ್ರಜಾಲಿಕರು

ವಿಷಯವಲ್ಲ. ಗ್ರಾಮದಲ್ಲಿರುವವರಿಗೆ ಓದುಬರೆಹ ಬಾರದ್ದರಿಂದ ಇನ್ನೂ ಅನೇಕ ದೊಡ್ಡವರು ಅವರನ್ನು ಮೋಸಪಡಿಸಿ ಪೀಡಿಸುತ್ತಾರೆಂದು ಕೇಳಿದ್ದೇನೆ. ನಿಮ್ಮ ವಿಷಯ ನಾನು ನೋಡಿಕೊಳ್ಳುತ್ತೇನೆ.'' ಎಂದು ಸಮಾಧಾನ ಹೇಳಿ ಮುರಾರಿ ತ್ರಿಲೋಚನನನ್ನು ಕಳುಹಿಸಿಕೊಟ್ಟನು.

ಮುರಾರಿ ಆಗ ತಾನೇ ನ್ಯಾಯಶಾಸ್ತ್ರಗಳಲ್ಲಿ ತೇರ್ಗಡೆಯಾಗಿ ನಗರದಲ್ಲಿ ನ್ಯಾಯವಾದಿಯಾಗಿ ಅಭ್ಯಾಸಕ್ಕೆ ತೊಡಗಿದ್ದನು. ವಾರಾಂತದಲ್ಲಿ ಸ್ವಂತ ಊರಾದ ಕಮಲಪುರಕ್ಕೆ ಬಂದು ತಾಯಿತಂದೆಯರೊಂದಿಗೆ ಇರುತ್ತಿದ್ದನು. ಕಮಲಪುರ ಗ್ರಾಮದಲ್ಲಿ ಅಧಿಕ ಸಂಖ್ಯಾತರು ರೈತರು. ಉಳಿದವರು ಅವರವರ ಕುಲವೃತ್ತಿ ಮಾಡಿಕೊಂಡಿರುವವರು. ಅವರಾರಿಗೂ ಓದುಬರೆಹ ಬಾರದು. ವಿದ್ಯೆಯ ಪ್ರಚಾರವು ಯುವಜನರಿಗೆ ಇಷ್ಟವೇ ಹೊರತು ವಯಸ್ಸಾದವರಾರೂ ಅದರ ಮೇಲೆ ಅಕ್ಕರೆ ತೋರಿಸಿದವರಲ್ಲ. ಆದುದರಿಂದ ಹಿರಿಯರಾರಿಗೂ ಓದುಬರೆಹ ಬಾರದು.

ಬರೆಹ ಬಾರದ ಕಾರಣದಿಂದ ತನ್ನ ಗ್ರಾಮದವರು ಎಷ್ಟೊಂದು ಅಧೋಗತಿಯಲ್ಲಿರುವರೆಂಬ ವಿಷಯವೂ ಮುರಾರಿಗೆ ಗೊತ್ತಿತ್ತು. ಅವನು ವಯಸ್ಕರಿಗಾಗಿ ಒಂದು ಪಾಠಶಾಲೆಯನ್ನು ಏರ್ಪಡಿಸಬೇಕೆಂದು ಅನೇಕಬಾರಿ ಪ್ರಯತ್ನಪಟ್ಟರೂ ಒಂದು ನರಕಾಗೆಯೂ ಆ ಶಾಲೆಯ ಮೇಲೆ ಆಸಕ್ತಿ ತೋರಿಸಲಿಲ್ಲ.

"ವಯಸ್ಸಾದ ಮೇಲೆ ಎಲ್ಲಿಯ ವಿದ್ಯೆ ? ಎಂತಹ ಓದು? ಏನು ಬರೆದೇವು? ಸರಸ್ವತೀ ದೇವಿಯ ಕಟಾಕ್ಷ ನಮ್ಮ ಮೇಲೆ ದಯ ತೋರಿಸಿದ್ದರೆ ಚಿಕ್ಕಂದಿನಿಂದಲೇ ನಮಗೆ ಓದುಬರೆಹ ಬರಬೇಕಿತ್ತು. ನಮ್ಮ ಕಾಲ ಅಸ್ತಮಾನಕ್ಕೆ ಮುಟ್ಟಲಾಗಿರುವ ವೇಳೆಯಲ್ಲಿ ಇನ್ನು ಮೇಲೆ ಓದು ಕಲಿತು ಆಗುವುದೇನಿದೆ ? '' ಎನ್ನುತ್ತಿದ್ದರು, ಗ್ರಾಮದೊಳಗಿನ ಹಿರಿಯರು.

ಆದರೆ ಈಗ ತ್ರಿಲೋಚನನ ಅನುಭವ ತಿಳಿದ ಮೇಲೆ ಮುರಾರಿಯ ಹಟ ಇನ್ನಷ್ಟು ಗಟ್ಟಿಯಾಯಿತು. ಚಿಕ್ಕವನಾದರೂ, ದೊಡ್ಡವನಾದರೂ ಮುದುಕನಾದರೂ ಗ್ರಾಮದಲ್ಲಿ ನಿರಕ್ಷರನಾಗಿ



ಒಬ್ಬರೂ ಇರಬಾರದೆಂದು ಅವನು ಒಂದು ಉಪಾಯ ಹುಡುಕಿದನು... 

ಒಬ್ಬರೂ ಇರಬಾರದೆಂದು ಅವನು ಒಂದು ಶೀವರ್ಮಾನಕ್ಕೆ ಬಂದನು. ಅವನೊಂದಿಗೆ ಅವನ ಹೆಂಡತಿ ಸುಮತಿಯೂ ಸಹಕಾರವಿತ್ತಳು. ಅವಳು ಸ್ತ್ರೀಯರೊಂದಿಗೂ, ಅವನು ಪುರುಷರೊಂದಿಗೂ ವಿದ್ಯೆಯ ವಿಷಯದಲ್ಲಿ ಆಸಕ್ತಿ ಹುಟ್ಟುವಂತೆ ಮಾತಾಡಿ ನೋಡಿದರು.

ಯಾರೊಡನೆ ಮಾತಾಡಿದರೂ ಒಂದೇ ಮಾತು. "ಸರಸ್ವತಿ ದೇವಿ ಈ ಗ್ರಾಮದವರ ಮೇಲೆ ಅನುಗ್ರಹ ತೋರಲಿಲ್ಲ!" ಎಂಬ ಅಭಿಪ್ರಾಯವೇ ಎಲ್ಲರಿಗೂ. ಇನ್ನು ಅವರ ಹತ್ತಿರ ಮಾತಾಡಿ ಲಾಭವಿಲ್ಲ. ಅವರದು ಕೇವಲ ಮೂಢ ವಿಶ್ವಾಸಗಳು. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕಾಗಿದೆ. ಮೂಢರನ್ನು ನಂಬಿಸಲು ಏನಾದರೂ ಅದ್ಭುತಗಳನ್ನು ತೋರಿಸಿದರೆ ನಂಬಿಬಿಡುತ್ತಾರೆ. ಅದ್ಭುತಗಳು ಮೂಢಾತ್ಮಕವಾದರೂ ಪರಿಣಾಮ ಒಳಿತಾಗಲು ಅದನ್ನೇ ಆಶ್ರಯಿಸಬೇಕು, ತಪ್ಪಿಲ್ಲ. ಹೀಗೆಂದುಕೊಂಡು ಮುರಾರಿ ಅದಕ್ಕಾಗಿ ಆಲೋಚಿಸತೊಡಗಿದನು. ಅದಕ್ಕೆ ಇಂದ್ರಜಾಲವೇ ಒಳ್ಳೆಯದೆನಿಸಿತು. ಸುಮತಿಯ ಬಂಧು ಒಬ್ಬನು ಇಂದ್ರಜಾಲಗಳನ್ನು ಬಲ್ಲವನಾಗಿದ್ದನು. ಮುರಾರಿ ಆತನ ಹತ್ತಿರ ಮಾತಾಡಿ ಅವನ ಸಲಹೆಯನ್ನು ಪಡೆದುಕೊಂಡನು.

ಅದರಂತೆ ಮುರಾರಿ ಅನೇಕ ನೂರು ಕಾಗದಗಳ ತುಂಡಿನಲ್ಲಿ ಹದ್ದಿನ ಗರಿಯ ಲೇಖನಿಯಿಂದ ನಿಂಬೆಯ ರಸದಲ್ಲಿ "ಬೇಕು" ಎಂದು ಸ್ಪಷ್ಟವಾಗಿ ಬರೆದು ಆ ಕಾಗದದ ಚೂರುಗಳನ್ನು ಬಿಸಿಲಿನಲ್ಲಿ ಒಣಗಿಸಿದನು. ಅವುಗಳಿಂದ ತನ್ನ ಗ್ರಾಮಸ್ಥರಿಗೆ ತಾರಕವಾಗುವಂತಹ ಅದ್ಭುತವನ್ನು ತೋರಿಸಬಹುದಾಗಿತ್ತು.

ಕಮಲಪುರ ಗ್ರಾಮದ ಸಮೀಪದಲ್ಲಿ ಚಿಕ್ಕದೊಂದು ಕವಲುನದಿ ಹರಿಯುತ್ತದೆ. ಅದು ಸರಸ್ವತೀನದಿಯ ಅಂಶದ್ದೆಂದೂ ಬಹಳ ಪವಿತ್ರವಾದುದೆಂದೂ ಗ್ರಾಮಸ್ಥರು ನಂಬುತ್ತಿದ್ದರು. ಪ್ರತಿ ವರ್ಷವೂ ಆ ನದಿಯನ್ನು ಪೂಜಿಸುತ್ತಿದ್ದರು. ಅವರ ಈ ವಿಶ್ವಾಸವು ಮುರಾರಿಗೆ ಉಪಯೋಗವಾಯಿತು. ಅವನು ಊರ ಹಿರಿಯರನ್ನೆಲ್ಲಾ ಕರೆದು "ನಿಮಗೆ



ಓದುಬರೆಹ ಬೇಡವೆಂದು ಸರಸ್ವತೀದೇವಿ ಹೇಳುತ್ತಾಳೆಂದು ನೀವೆಲ್ಲಾ ನಂಬಿದ್ದೀರಿ. ಅವಳು ನಿಮಗೆ ಪ್ರತ್ಯಕ್ಷಳಾಗಿ ಹಾಗೆ ಹೇಳಿದಳೇನು ? ಇಲ್ಲವಷ್ಟೆ ? ಹಾಗೆ ಎಂದಿಗೂ ನಡೆದಿರಲಿಕ್ಕಿಲ್ಲ. ಅದು ಕೇವಲ ನಿಮ್ಮ ನಂಬುಗೆ ಮಾತ್ರವೇ. ಈ ನಂಬುಗೆಗೆ ಅರ್ಥವೇ ಇಲ್ಲವೆಂದು ನನಗೆ ತೋರುತ್ತೆ. ವಿದ್ಯೆಗಳಿಗೆಲ್ಲಾ ಆದಿ ದೇವತೆಯಾಗಿದ್ದವಳು ಹಾಗೆಂದಿಗೂ ಹೇಳಳು. ಚಿಕ್ಕವರು ದೊಡ್ಡವರು, ಬಡವರು ಬಲ್ಲಿದರು ಎಂದು ಪ್ರತಿಯೊಬ್ಬರೂ ತನ್ನ ಅನುಗ್ರಹ ಪಡೆಯಬೇಕೆಂದೇ, ಅಂದರೆ ಓದುಬರೆಹ ಕಲಿಯಬೇಕೆಂದೇ ಅವಳು ಕೋರುತ್ತಾಳೆ. ಇದೋ, ಈ ಬಿಳಿಯ ಕಾಗದದ ತುಂಡುಗಳನ್ನು ತೆಗೆದುಕೊಳ್ಳಿ. ಪವಿತ್ರವಾದ ಆ ನದಿಯ ನೀರಿನಲ್ಲಿ ಇದನ್ನು ಮುಳುಗಿಸಿ, ದೇವಿ ನಿಮ್ಮನ್ನು ಓದುಬರೆಹ ಕಲಿಯಬೇಕೆನ್ನುವಳೇ, ಬೇಡವೆನ್ನುವಳೇ ಕೇಳಿ ನೋಡಿರಿ. ಆಕೆ ತನ್ನ ಅಭಿಪ್ರಾಯವನ್ನು ನಿಮ್ಮ ನಿಮ್ಮ ಕಾಗದದ ತುಂಡಿನಲ್ಲಿ ಬರೆಯುತ್ತಾಳೆ. ಆಗ ಸ್ಪಷ್ಟವಾಗಿ ತಿಳಿಯುತ್ತೆ ಆ ದೇವಿಯ ಇಚ್ಛೆ." ಎಂದನು.

ಮುರಾರಿಯ ಆಲೋಚನೆಯನ್ನು ಗ್ರಾಮಸ್ಥರು ನಂಬಿದಂತೆಯೇ ತೋರಿತು. ಎಲ್ಲಾ ಸ್ತ್ರೀ ಪುರುಷರೂ ಒಂದೊಂದು ತುಂಡು ಕಾಗದವನ್ನು ತೆಗೆದುಕೊಂಡು ಮುರಾರಿಯೊಂದಿಗೆ ನದಿಯ ಬದಿಗೆ ಹೋಗಿ, ಒಬ್ಬರ ಹಿಂದೊಬ್ಬರಂತೆ ಕಾಗದದ ತುಂಡನ್ನು ನೀರಿನಲ್ಲಿ ಮುಳುಗಿಸಿ, "ನಾವು ಓದುಬರೆಹ ಕಲಿಯಬೇಕೇ ಬೇಡವೇ ? ನೀನೇ ಹೇಳು ಸರಸ್ವತೀದೇವೀ" ಎಂದು ಬೇಡಿದರು. ನೆನೆದ ಕಾಗದದ ತುಂಡಿನಲ್ಲಿ ಸ್ವಲ್ಪ ಹೊತ್ತಿನಲ್ಲಿ "ಬೇಕು" ಎಂಬ ಮಾತು ಕಾಣಿಸಿತು. ಮುರಾರಿ ಒಬ್ಬೊಬ್ಬರದನ್ನೂ ಓದಿ ತೋರಿಸಿದ.

ಆ ಕ್ಷಣದಿಂದ ಎಲ್ಲರಿಗೂ ವಿದ್ಯೆಯ ಮೇಲೆ ಮನಸ್ಸು ಹರಿಯಿತು. ಉತ್ಸಾಹವೆದ್ದಿತು. ಎಲ್ಲರೂ ಮುರಾರಿ ಪ್ರಾರಂಭಿಸಿದ ವಯಸ್ಕರ ಪಾಠಶಾಲೆಯನ್ನು ಅಕ್ಕರೆಯಿಂದ ಅಲಂಕರಿಸತೊಡಗಿದರು. ಮನಸ್ಸುಗೊಟ್ಟು ಎಲ್ಲರೂ ಓದುಬರೆಹ ಕಲಿಯತೊಡಗಿದರು. ಅವರೆಲ್ಲ ವಿದ್ಯಾವಂತರಾಗಬೇಕೆಂದು ಸ್ವರಸ್ವತೀದೇವಿಯೇ ಹೇಳಿದಳಲ್ಲಾ !

ಅವರಿಗೆಲ್ಲಾ ಓದುಬರೆಹ ಕಲಿಸುವ ಭಾರವು ಸೂಮಿತಿಯ ಮೇಲೇ ಇದ್ದಿತು. ವಾರಾಂತದಲ್ಲಿ ಮುರಾರಿ ಬಂದು ಅವಳಿಗೆ ಸಹಾಯಕನಾಗುವನು. ಕ್ರಮವಾಗಿ ಅವನಿಗೆ ನಗರದ ಸೇವಾಸಂಸ್ಥೆಯ ಸಹಕಾರವೂ ಲಭಿಸಿತು. ಒಂದು ವರ್ಷದೊಳಗೆ ಅವನ ಉದ್ಯಮವು ಜಯಪ್ರದವಾಯಿತು. ಆಮೇಲೆ ಕಮಲಪುರದಲ್ಲಿ ಒಬ್ಬನೇ ಒಬ್ಬ ನಿರಕ್ಷರದವನೂ ಇಲ್ಲದಂತಾದನು. ಆ ಗ್ರಾಮಕ್ಕೆ ಕಮಲಪುರವೆಂಬ ಹೆಸರು ಹೋಗಿ ಸರಸ್ವತಿಪುರವೆಂಬ ಹೆಸರೂ ಬಂದಿತು.





# ಶಾಪ ಸಂಪಾದನೆ

ಒಂದು ಊರಿನಲ್ಲಿ ಶ್ರೀಮಂತನೆಂಬ ಹೆಸರಿನ ಬಡವನಿದ್ದ. ಬಡವನಾದರೂ ಗುಣವಂತನಾಗಿದ್ದ. ಅವನ ತಂದೆ ತಾಯಂದಿರು ಅವನ ಚಿಕ್ಕತನದಲ್ಲಿಯೇ ಸತ್ತು ಹೋಗಿದ್ದರು. ಆದುದರಿಂದ ಅವನು ದಿಕ್ಕಿಲ್ಲದವನಂತೆಯೇ ಆಗಿದ್ದ. ಅವನ ಸೋದರ ಮಾವನೊಬ್ಬ ಅವನನ್ನು ತನ್ನ ಮನೆಯಲ್ಲಿಟ್ಟುಕೊಂಡು ಅದೂ ಇದೂ ಕೆಲಸ ಮಾಡಿಸಿಕೊಳ್ಳುತ್ತಿದ್ದ. ಮಾವನಿಗೇನೋ ಹುಡುಗನಿಗೆ ಓದುಬರೆಹ ಕಲಿಸಬೇಕೆಂದಿದ್ದರೂ ಮಾವನ ಹೆಂಡತಿ ಅವನನ್ನು ಶಾಲೆಗೆ ಕಳುಹಿಸಬೇಡವೆಂದು ಹೇಳಿ, ಪೂರಾ ದಿನವೂ ಮನೆಗೆಲಸಗಳಿಗೇ ಇಟ್ಟು ಕೊಂಡಳು.

ಶ್ರೀಮಂತನ ಸೋದರ ಮಾವನಿಗೆ ಸುಂದರಿ ಎಂಬ ಮಗಳಿದ್ದಳು. ಶ್ರೀಮಂತನೂ ಸುಂದರಿಯೂ ಈಡು ಜೋಡಿನವರಾಗಿರುವುದನ್ನು ನೋಡಿ ಇಬ್ಬರೂ ಮದುವೆಗೆ ತಕ್ಕ ವಧೂವರರಾಗುತ್ತಾರೆಂದು ಅಕ್ಕ ಪಕ್ಕದವರು ಹೇಳುತ್ತಿದ್ದರು.

ಶ್ರೀಮಂತನಿಗೆ ಎಷ್ಟು ಸ್ವಲ್ಪ ನೋವಾದರೂ ಸುಂದರಿ ಕರಗಿಹೋಗುವಳು. ಅವಳಿಗೆ ತನ್ನ ಮೇಲೆ ಅಷ್ಟೊಂದು ಪ್ರೇಮವಿರುವುದನ್ನು ನೋಡಿ ಶ್ರೀಮಂತನು ಸಂತೋಷದಿಂದ ಉಬ್ಬಿಹೋಗುತ್ತಿದ್ದನು. ದೊಡ್ಡ ಹುಡುಗಿಯಾದ ಮೇಲೆ ಸುಂದರಿಗೆ ಶ್ರೀಮಂತನ ಮೇಲೆ ಸಲಿಗೆ ಕಡಿಮೆಯಾಯಿತು. ಮೊದಲಿನಂತೆ ಆಡುವುದು ನಲಿಯುವುದು ತಗ್ಗಿತು. ಈ ಬದಲಾವಣೆಯಿಂದ ಶ್ರೀಮಂತನಿಗೇನೂ ಕಷ್ಟವೆನಿಸಲಿಲ್ಲ. ಅವಳು ಮರೆಯಲ್ಲಿ ಅವನನ್ನು ನೋಡುವುದರಲ್ಲಿಯೇ ಅವನಿಗೆ ಸಮಾಧಾನವೆನಿಸುತ್ತಿತ್ತು. ಸುಂದರಿ ತಾಯಿಗೆ ಹೆದರಿ, ತನ್ನೊಂದಿಗೆ ಮಾತು ಕತೆ ಕಡಿಮೆ ಮಾಡಿರುವಳೆಂದು ಅವನಿಗೆ ಗೊತ್ತಿತ್ತು. ಅವಳ ಪ್ರೇಮ ತನ್ನ ಮೇಲೆ ತಗ್ಗದೆ ಎಂದಿನಂತೆ ತುಂಬಿಕೊಂಡಿದೆಯೆಂದೂ ತಿಳಿದಿದ್ದ. ಇದರಿಂದ ಅವಳ ಮೇಲೆ ಅವನಿಗೆ ಇನ್ನಷ್ಟು ಹೆಚ್ಚು ಪ್ರೇಮವಾಯಿತು.

ಒಂದು ದಿನ ಸುಂದರಿ ಒಬ್ಬಳೇ ಇರುವುದನ್ನು ನೋಡಿ. ಶ್ರೀಮಂತನು ಅವಳ ಹಿಂದೆ ಸದ್ದಿಲ್ಲದೆ ಹೋಗಿ ಅವಳ ಕಣ್ಣುಗಳನ್ನು ಮುಚ್ಚಿದನು. ಆಗಲೇ ಅಡಿಗೇ ಮನೆಯಿಂದ ಹೊರಬರುವ ಸುಂದರಿಯ ತಾಯಿ ಅದನ್ನು ನೋಡಿ ಭಗ್ಗನೆ ಉರಿದು ಸಿಟ್ಟು ಬೆಂಕಿಯಾಗಿ ಆರ್ಭಟಿಸಿದಳು. ತೋಟದಲ್ಲಿದ್ದ ತನ್ನ

ಬಿ. ನಾಗೇಶ್ವರರಾವ್



ಗಂಡನನ್ನು ಕರೆದು, "ನೋಡಿದಿರಾ? ಪ್ರಾಯದ ಹುಡುಗೀ ಹತ್ತಿರ ಈ ಪೋರನ ಸರಸ! ನಾಳೆ ಅವಳ ಮದುವೆ ಹೇಗಾದೀತು?..." ಎನ್ನುತ್ತಾ ಶ್ರೀಮಂತನ ಮೇಲೆ ಬೈಗುಳ ಮಳೆಯನ್ನೇ ಸುರಿದಳು.

"ಅದೇಕೆ ಹಾಗೆ ಹೇಳುವಿರಿ ಅತ್ತೇ? ಅವಳನ್ನು ಬೇರೆ ಯಾರೋ ಮದುವೆ ಮಾಡಿಕೊಳ್ಳುವ ಹಾಗೆ ಮಾತಾಡುವಿರಲ್ಲಾ, ನಾನಿರುವಾಗ?" ಎಂದ ಶ್ರೀಮಂತ ಅತ್ತೆಯನ್ನು ವಿಚಿತ್ರವಾಗಿ ನೋಡುತ್ತ,

"ಇಲ್ಲದೇ ಏನಪ್ಪಾ, ನಮ್ಮನೇಲಿ ಕುತ್ತಿಗೇ ಗುಳೀ ವರೆಗೆ ತಿಂದು ಸೊಕ್ಕಿದ ಗೂಳಿಯಾಗಿದ್ದೀ! ಇನ್ನೊಮ್ಮೆ ಇವಳ ಹತ್ತಿರ ಬಂದು ನೋಡು, ಕೈಗಳನ್ನು ಮುರಿದು ಹೊರಗೆ ದೂಡಿಸುತ್ತೇನೆ," ಎಂದು ಹೇಳಿ ತಾಯಿ ಮಗಳನ್ನು ಎಳೆದುಕೊಂಡು ಒಳಗೆಹೋದಳು.

"ಇದೇನು ಮಾವಯ್ಯಾ, ಅತ್ತೆ ಹೇಳುವ ಮಾತು?" ಎಂದು ಕೇಳಿದ ಶ್ರೀಮಂತ ಮಾವಯ್ಯನ ಕಡೆಗೆ ತಿರುಗಿ.

"ಎಲೋ, ಸುಂದರಿಯ ಸುದ್ದಿ ಎತ್ತಿದೆಯೆಂದರೆ ಎಲುವುಗಳು ಉದುರಿಯಾವು. ತಾನು ತೂರಲಿಕ್ಕೇ ತೂತು ಸಾಲದಿರುವಾಗ ಕೊರಳಲ್ಲೊಂದು ಡೋಲಂತೆ! ನಿನಗೆ ಬೇರೆ ಗತಿಯಿಲ್ಲದ್ದರಿಂದಲೇ ಅಲ್ಲವೇನೋ ನನ್ನ ಮನೆಯಲ್ಲಿ ತಿಂದುಕೊಂಡಿದ್ದಿ? ನೀನು ಮದುವೆ ಮಾಡಿಕೊಂಡರೆ ಅವಳಿಗೇನು ಹೊಟ್ಟೆ ತುಂಬಿಸುವಿಯೋ? ಬುದ್ಧಿಗಿದ್ದಿ ಇದೆಯ?" ಎಂದನು ಮಾವ.

ಶ್ರೀಮಂತನು ತನ್ನ ಮಾವನಿಗೆ ಮಗಳನ್ನು ತನಗೆ ಕೊಟ್ಟು ಮದುವೆಮಾಡಿ ಮನೆಯಳಿಯನನ್ನಾಗಿ ಯಾದರೂ ಇಟ್ಟುಕೊಳ್ಳುವಂತೆ ಕೇಳಿ ನೋಡಿದ. ಹೇಗಾದರೂ ದುಡಿದು ಹೆಂಡತಿಯನ್ನು ಕಾಪಾಡುವೆ ನೆಂದೂ ಭರವಸೆ ಹೇಳಿದ.

ಮನುಷ್ಯನಿಗೆ ಗುಣವೇ ಪ್ರಧಾನವಲ್ಲದೆ ಹಣವಲ್ಲ ವೆಂದು ವಾದಿಸಿದ. ಸುಂದರಿಯನ್ನು ತಾನು ತುಂಬಾ ಪ್ರೇಮಿಸುವುದಾಗಿಯೂ, ಅವಳೂ ಹಾಗೆಯೇ ಎಂದೂ ಅಂಗಲಾಚಿದ.

"ನಿನ್ನ ಈ ಶುಷ್ಕವಾದಗಳಿಂದ ಮನೆಬಾಗಿಲು ಬರುವುದಿಲ್ಲ. ತಿಂಡಿತೀರ್ಥ ಸಿಗುವುದಿಲ್ಲ. ಒಳ್ಳೆಯ ತನವು ಒಂದು ತುತ್ತನ್ನೂ ತಂದುಕೊಡದು. ಈ ವೇದಾಂತಗಳನ್ನು ಕಟ್ಟಿಡು. ಹಣವಿದ್ದರೇನೇ ಎಲ್ಲವೂ ಇರುತ್ತೆ" ಎಂದ ಮಾವ.

ಶ್ರೀಮಂತನಿಗೆ ಪೌರುಷ ಕೆರಳಿತು. "ಸರಿ ಮಾವಯ್ಯ. ನನ್ನ ರಕ್ತವನ್ನೇ ಧಾರೆಯೆರೆದಾದರೂ ಹಣ ಸಂಪಾದನೆ ಮಾಡಿ ಸುಂದರಿಯನ್ನು ದಕ್ಕಿಸಿ ಕೊಳ್ಳುತ್ತೇನೆ. ಹಣ ಸಂಪಾದಿಸಲಾರದೆಹೋದರೆ ನಿಮಗಾರಿಗೂ ಮುಖ ತೋರಿಸಲಾರೆ. ಒಂದು ವರ್ಷದ ಗಡುವಿನವರೆಗೆ ಮಾತ್ರ ಸುಂದರಿಯ ಮದುವೆಗೆ ತಲೆ ಹಾಕಬೇಡಿ ಮತ್ತೆ!" ಎಂದು ಹೇಳಿ ಹೊರಡಲು ನಿಂತನು. "ಹೌದೌದು! ಮಹಾ ಕೋಟೆ ಗೆದ್ದವೀರ! ನೀನು ಲಕ್ಷಗಟ್ಟೆ ಸಂಪಾದಿಸು

ವುದೂ ನನ್ನ ಮಗಳನ್ನು ಮದುವೆಯಾಗುವುದೂ ಕುದುರೆಗೆ ಕೊಂಬು ಮಾಡುವುದೂ ಎಲ್ಲಾ ಒಂದೇ. ಹಾಗೇ ಅಂದುಕೊಂಡು ನಡೆ" ಎಂದ ಮಾವ ಎಕ್ಕರಿಸುವ ಧೋರಣೆಯಲ್ಲಿ.

ಅಲ್ಲಿಂದ ಹೊರಟುಹೋದ ಮೇಲೆ ಹಣ ಸಂಪಾದಿಸುವುದು ಎಷ್ಟು ಕಷ್ಟವೆಂದು ಶ್ರೀಮಂತನಿಗೆ ತಿಳಿಯತೊಡಗಿತು. ಎಷ್ಟು ಕಷ್ಟಪಟ್ಟು ಕೆಲಸ ಮಾಡಿದರೂ ಹೊಟ್ಟೆಗೇ ಸರಿಯಾಗುತ್ತಿತ್ತು. ಇನ್ನು ಉಳಿಸುವುದೆಲ್ಲಿಂದ ಬಂತು? ಶ್ರೀಮಂತನಿಗೆ ಜೀವನದ ಮೇಲೆ ವಿರಕ್ತಿ ಹುಟ್ಟತೊಡಗಿತು. ಮನುಷ್ಯತ್ವದ ಮೇಲೆಯೂ ಒಳ್ಳೆಯತನಗಳ ಮೇಲೆಯೂ ನಂಬುಗೆ ಹೋಯಿತು.

ಒಂದು ದಿನ ರಾತ್ರಿ ಶ್ರೀಮಂತನು ಯಾವುದೋ ಒಂದು ಮನೆಯ ಹೊರ ಜಗುಲಿಯಲ್ಲಿ ಮಲಗಿಕೊಂಡಿದ್ದನು. ಆಗ ಇಬ್ಬರು ಮುಸುಗಿನ ಕಳ್ಳರು ಯಾರ ಮನೆಯಿಂದಲೋ ಕದ್ದ ವಸ್ತುಗಳನ್ನು ಮೂಟೆ ಕಟ್ಟಿಕೊಂಡು ಬೀದಿಯಲ್ಲಿ ಅಡಗಿಕೊಂಡು ಬರುತ್ತಿರುವುದನ್ನು ಅವನು ನೋಡಿದನು.

ಅವರ ರೀತಿಯಿಂದ ಕಳ್ಳರೆಂದು ಅರಿತು ಶ್ರೀಮಂತನು ತಟಕ್ಕನೆದ್ದು ಅವರ ದಾರಿಗೆ ಅಡ್ಡಕಟ್ಟಿ ನಿಂತನು. ಕೂಡಲೇ ಕಳ್ಳರಲ್ಲೊಬ್ಬ ಅವನನ್ನು ನೋಡಿ, "ಏನೋ? ಬದುಕುವ ಆಸೆ ಬಿಟ್ಟಿದ್ದೀಯಾ?" ಎಂದು ಹೆದರಿಸುವಂತೆ ಕೇಳಿದ.

ಅದಕ್ಕೆ ಉತ್ತರವಾಗಿ ಶ್ರೀಮಂತನು ಬಹಳ ಕೋಪದಿಂದ ಅವನ ದವಡೆಯ ಮೇಲೆ ಬಲವಾಗಿ ಒಂದೇಟು ಕೊಟ್ಟ. ಆ ಪೆಟ್ಟಿಗೆ ಅವನು ಕುಸಿದು ಬಿದ್ದು ನರಳತೊಡಗಲು ಎರಡನೇ ಕಳ್ಳನಿಗೆ ಭಯದಿಂದ ಕೈಕಾಲು ನಡುಗತೊಡಗಿತು.

"ಒಳ್ಳೆಯ ಮಾತಿನಲ್ಲಿ ನಿಜ ಹೇಳಿ. ಈ ಹಣ ಎಲ್ಲಿಂದ? ನಿಮ್ಮ ಕೈಗೆ ಹೇಗೆ ಬಂತು? ನೀವೇಕೆ ಇಂಥಾ ನೀಚ ಕೆಲಸದಲ್ಲಿ ಬದುಕುತ್ತೀರಿ?" ಎಂದು ಶ್ರೀಮಂತನು ಕಳ್ಳನನ್ನು ಕೇಳಿದ.



ಅದಕ್ಕೆ ಎರಡನೇ ಕಳ್ಳ, "ಅದೇನಪ್ಪ ನಿನ್ನ ಪ್ರಶ್ನೆ? ಹಣವನ್ನು ಯಾರು ಸಂಪಾದಿಸಿಕೊಂಡರೂ ನಿಯಮಕ್ಕೆ ಸರಿಯಾಗಿ ಸಂಪಾದಿಸಲಾರರಲ್ಲ? ನನ್ನ ಮಾತು ಸುಳ್ಳಾದರೆ ಹಣವಂತರ ಹತ್ತಿರ ಕೇಳಿ ನೋಡು. ನಿನ್ನ ಪ್ರಶ್ನೆ ತಪ್ಪಾದುದಪ್ಪಾ. ಹಣ ಎಷ್ಟಿದೆ ಅಂತ ಕೇಳಬೇಕೇ ಹೊರತು ಹೇಗೆ ಬಂತು ಅಂತ ಕೇಳಬಾರದು. ಹಣ ಸಂಪಾದಿಸಲು ಶಕ್ತನಾದವನ ಎದುರಿನಲ್ಲಿ ಹಣ ಸಂಪಾದಿಸಲು ಕೈಲಾಗದವನು ನೀಚತನದಿಂದಲೇ ಬದುಕಬೇಕು ಮತ್ತೆ. ಕಟ್ಟಿಕೊಂಡ ಹೆಂಡತಿ ಕೂಡಾ ಹಣ ಸಂಪಾದಿಸಿ ತಾ ಅನ್ನುತ್ತಾಳೆಯೋ ಹೊರತು ಇಂತಿಂಥಾ ರೀತಿಯಲ್ಲೇ ಸಂಪಾದಿಸಬೇಕೆಂದು ಹೇಳುತ್ತಾ ಕೂಡುವುದಿಲ್ಲ. ಪಾಪ, ನಿನಗಿನ್ನೂ ಹಣದ ಸಂಗತಿ ಗೊತ್ತಿಲ್ಲ. ಅಪ್ಪಾ ಹುಡುಗಾ, ಹಣದ ಮುಂದೆ ಒಳ್ಳೆಯತನದ ಮಾತನ್ನು ಎತ್ತಿದರೆ ಅದು ಬಗಿದು ಕೂಡುತ್ತದೆಯೇ ಹೊರತು ಮೇಲೇಳದು" ಎಂದನು.



ಶ್ರೀಮಂತನು ತುಸು ಆಲೋಚಿಸಿ, "ಹಾದು. ಹಣ ನನಗೂ ಬೇಕು. ಸ್ವಲ್ಪವಲ್ಲ. ಲಕ್ಷಗಟ್ಲೆ ಬೇಕು. ನನ್ನನ್ನು ನಿಮ್ಮ ಜತೆಗಾರರನ್ನಾಗಿ ಸೇರಿಸಿಕೊಳ್ಳುವಿರಾ ? " ಎಂದು ಕೇಳಿದ.

ಕಳ್ಳ ನಗುತ್ತ "ಅದಕ್ಕೇನು ಬಿಡು, ನಮ್ಮಲ್ಲಿ ಎಷ್ಟು ಮಂದಿ ಸೇರಿದರೂ ಇನ್ನೂ ಸ್ಥಳವಿರುತ್ತದೆ. ಖಾಲಿ ಇಲ್ಲವೆನ್ನಲಿಕ್ಕೆ ಇದೊಂದು ಉದ್ಯೋಗದ ಕಾರ್ಯಾಲಯವೆಂದುಕೊಂಡೆಯಾ ? ನಿನ್ನಂಥಾ ಗಟ್ಟಿ ಗುಂಡಿಗೆಯವರು ನಮ್ಮೊಂದಿಗಿದ್ದರೆ, ಅದಕ್ಕಿಂತ ಮೇಲೆ ನಮಗೇನಾಗಬೇಕಾಗಿದೆ ? ಹಟ ಹಿಡಿದರೆ ಲಕ್ಷವಲ್ಲ ಕೋಟಿ ಕೋಟಿ ಗಳಿಸಿಕೊಳ್ಳಬಹುದು. ನಡೆ, ಹೋಗೋಣ " ಎಂದನು ಕಳ್ಳ.

ಶ್ರೀಮಂತನು ಅವರೊಂದಿಗೆ ಹೊರಟು ಕಳ್ಳನಾಗಿ ಬದಲಾವಣೆ ಪಡೆದನು. ಅವರೊಂದಿಗೆ ಅವನು ತನ್ನ ಧೈರ್ಯ ಸಾಹಸಗಳಿಂದ ಕಳ್ಳರಿಗೆ ನಾಯಕನಾಗಿ, ಅನೇಕ ಮಂದಿ ಶ್ರೀಮಂತರ ಮನೆಗಳನ್ನು ದೋಚುತ್ತ ಕಳ್ಳರ ರಹಸ್ಯ ಸ್ಥಾನದಲ್ಲಿ ಸೇರಿಸಿದನು. ಹೀಗೆ ಕಳ್ಳನಾಗಿ ಬದಲಾಯಿಸಿದರೂ ಅವನಲ್ಲಿಯು ಮಾನವತೆ ಸಾಯುಲಿಲ್ಲ. ಆದುದರಿಂದ ಅವನು ತನ್ನ ಅನುಚರರಿಗೆ ಕೆಲವು ನಿಯಮಗಳನ್ನು ಪಾಲಿಸಬೇಕೆಂದು ಕಠಿನವಾಗಿ ಶಾಸನ ಮಾಡಿದ್ದನು.

ಒಂದು ಸಾರಿ ಅವನಿಗೆ ಸುಂದರಿಯನ್ನು ನೋಡಬೇಕೆಂದು ತೋರಿತು. ಗಟ್ಟಿಮುಟ್ಟರಾದ ತನ್ನ ನಾಲ್ಕು ಮಂದಿ ಸಹಚರರನ್ನು ಕರೆದುಕೊಂಡು ಹೊರಟನು. ಎಲ್ಲರೂ ದೊಡ್ಡ ಸಂಭಾವಿತ ಮನುಷ್ಯರಂತೆ ದುಸ್ತು ಧರಿಸಿದ್ದರು. ಸುಂದರಿಯ ಊರಿಗೆ ಹೋದ ಕೂಡಲೇ, ಸುಂದರಿಗೆ ಆದಿನ ರಾತ್ರಿಯಲ್ಲೇ ಮದುವೆಯಾಗುವ ಸಂಗತಿ ಗೊತ್ತಾಯಿತು.

ರಾತ್ರಿ ಮೊದಲನೇ ಜಾಮ ಕಳೆದ ಮೇಲೆಯೇ ಮದುವೆಯ ಮುಹೂರ್ತವಂತೆ. ಶ್ರೀಮಂತನು ಮದುವೆಯ ಮನೆಯಲ್ಲಿ ಮದುಮಗನನ್ನೂ ಅವನ ಕಡೆಯವರನ್ನೂ ನೋಡಿ ಆಶ್ಚರ್ಯಪಟ್ಟನು. ಈ ಮೊದಲು ಶ್ರೀಮಂತನು ಕೊಳ್ಳೆ ಹೊಡೆದ ಒಂದು ಮದುವೆಯಲ್ಲಿ ಇಲ್ಲಿರುವ ವರನೇ ಮದುಮಗನಾಗಿದ್ದನು. ಮದುಮಗನ ತಂದೆಯೂ ಇಲ್ಲಿರುವವನೇ. ಆ ವಧುವಿನೊಂದಿಗೆ ಈ ವರನ ಮದುವೆಯೂ ಆಗಿತ್ತು. ತನ್ನ ಮಾವಯ್ಯ ಹಣದ ವ್ಯಾಮೋಹದಿಂದ ಹೀಗೆ ಸುಂದರಿಯ ಕುತ್ತಿಗೆ ಕೊಯ್ಯಲು ಸಿದ್ಧನಾಗಿದ್ದಾನೆ.

ಈಗ ತನ್ನ ಕರ್ತವ್ಯವೇನೆಂಬುದನ್ನು ಶ್ರೀಮಂತನು ಕೂಡಲೇ ನಿರ್ಣಯಿಸಿ, ಕಾರ್ಯದಲ್ಲಿ ಪ್ರವೃತ್ತನಾಗಿ ತನ್ನ ಅನುಚರರಿಗೆ ಏನು ಮಾಡಬೇಕೆಂಬುದನ್ನು ಹೇಳಿ ಸಿದ್ಧಪಡಿಸಿದನು.

ಮದುವೆಯ ಕ್ರಮಗಳು ಒಂದೊಂದಾಗಿ ಪ್ರಾರಂಭವಾದುವು. ಮಂತ್ರಗಳೂ, ವಾದ್ಯಗಳೂ, ಬಜಂತ್ರಿಗಳೂ ಮೊಳಗಿ ಗಡಿಬಿಡಿ ಶುರುವಾಯಿತು. ಮದುಮಗಳನ್ನು ಹಿಂದಿನ ಕೋಣೆಯಲ್ಲಿ ಕುಳ್ಳಿರಿ

ಸಿದ್ದರು. ಅವಳ ಹತ್ತಿರ ಯಾವಳೋ ಮುತ್ತೈದೆಯೊಬ್ಬಳಿದ್ದಳು. ಆಗ ಶ್ರೀಮಂತನ ಅನುಚರನೊಬ್ಬ ಅಲ್ಲಿಗೆ ಬಂದು, "ನಿನ್ನನ್ನು ಕರೆಯುತ್ತಿದ್ದಾರೆ ಅಲ್ಲಿ" ಎಂದು ಹೇಳಿದ ಕೂಡಲೇ ಆ ಮುತ್ತೈದೆ ಎದ್ದು ಅವನೊಂದಿಗೆ ಹೋದಳು.

ಒಂಟಿಯಾಗಿದ್ದ ಸುಂದರಿಯ ಬಳಿಗೆ ಇನ್ನೊಬ್ಬನು ಬಂದು, "ನಿನ್ನ ಬಾವ ಬಂದಿದ್ದಾನಮ್ಮಾ. ಒಂದು ಮಾತು ಮಾತಾಡಿ ಬಂದುಬಿಡು." ಎಂದ ಕೂಡಲೇ ಸುಂದರಿ ಆತುರದಿಂದೆದ್ದಳು. ಅವನು ಅವಳನ್ನು ಮನೆಯ ಹಿಂದೆ ಕರೆದುಕೊಂಡು ಹೋದ.

ಪುರೋಹಿತರು "ಮದುಮಗಳು ಬರಲಿ, ಕರೆದು ತನ್ನಿ" ಎಂದು ಕೂಗಿದರು. ಆದರೆ ಎಲ್ಲಿಯೂ ಮದುಮಗಳ ಸುಳಿವು ಕಾಣಲಿಲ್ಲ. ಮದುವೆಯ ಮಂಗಳ ಶಬ್ದಗಳು, ಆಂದೋಳನೆಯ ಉದ್ಗಾರಗಳಿಂದಲೂ, ಕರ್ಕಶ ಕೂಗಾಟಗಳಿಂದಲೂ ವಿಕಾರಗೊಂಡು ಬದಲಾಯಿಸಿತು. ಮದುಮಗಳನ್ನು ಹುಡುಕುತ್ತಾ ಕೆಲವರು ಊರೂರು ಕೇರಿಕೇರಿ ಹೊರಟರು.

ಮದುಮಗನೂ ಮದುಮಗನ ತಂದೆಯೂ ಏನು ಮಾಡುವರೆಂದು ಶ್ರೀಮಂತನು ಸರಿಯಾಗಿ ಊಹಿಸಿದ್ದನು. ಅದರಂತೆ ಅವರಿಬ್ಬರೂ ಸುಂದರಿಯ ಮನೆಯಲ್ಲಿ ಸಿಕ್ಕಿದಷ್ಟು ನಗನಾಣ್ಯ ಮೊದಲಾದ ಬೆಲೆಬಾಳುವ ವಸ್ತುಗಳನ್ನು ದೋಚಿಕೊಂಡು ಓಡಿ ಹೋಗುತ್ತಿರುವಾಗ, ಶ್ರೀಮಂತನು ತನ್ನ ಅನುಚರರ ಗುಂಪಿನಿಂದ ಅವರನ್ನೆಲ್ಲ ಅಡ್ಡಗಟ್ಟಿ ಹಿಡಿದು ಬಂಧಿಸಿದನು. ಕಳ್ಳ ಸೊತ್ತುಗಳೊಂದಿಗೆ ಅವರನ್ನೆಲ್ಲಾ ಎಳೆದುಕೊಂಡು ಸೋದರಮಾವನ ಮನೆಗೇ ಕರೆದುತಂದನು. ಅದೇ ಸಮಯದಲ್ಲಿ ಶ್ರೀಮಂತನ ಅನುಚರನೊಬ್ಬ ಸುಂದರಿಯನ್ನೂ ಕರೆದುಕೊಂಡುಬಂದನು.

"ಮಾವಯ್ಯಾ, ನನ್ನನ್ನು ನಿರಾಕರಿಸಿ ಸುಂದರಿಗೆ ಬಹಳ ಒಳ್ಳೇ ಸಂಬಂಧ ತಂದಿರಿ!" ಎಂದನು. ಕೈಕಾಲು ಬಿಗಿದ ಕಳ್ಳವರನನ್ನೂ ಅವನ ಅಪ್ಪನನ್ನೂ ತೋರಿಸುತ್ತಾ.

"ಹೌದಪ್ಪಾ, ನನಗೀಗ ಕಣ್ಣು ತೆರೆಯಿತು. ನೀನು ದೇವರ ಹಾಗೆ ಸಮಯಕ್ಕೆ ಬಂದು ಹೀಗೆ ಮಾಡದೆ ಹೋಗಿರುತ್ತಿದ್ದರೆ, ನನ್ನ ಮಗಳ ಕುತ್ತಿಗೆಯನ್ನು ಕೊಯ್ದವನಾಗುತ್ತಿದ್ದೆ!" ಎಂದ ಶ್ರೀಮಂತನ ಸೋದರಮಾವ.

ಮದುವೆಯ ತಯಾರಿಕೆಗಳಾವುದೂ ವ್ಯರ್ಥವಾಗದಂತೆ, ಬಂದವರಿಗೆಲ್ಲಾ ನಿರಾಶೆಯಾಗದಂತೆ ಸುಂದರಿಯ ತಂದೆ ಮರು ಮುಹೂರ್ತದಲ್ಲೇ ಸುಂದರಿಯನ್ನು ಶ್ರೀಮಂತನಿಗೆ ಕೊಟ್ಟು ಮದುವೆ ನೆರವೇರಿಸಿದನು. ಆಮೇಲೆ ಶ್ರೀಮಂತನು ಕಳ್ಳತನವನ್ನು ಬಿಟ್ಟು ಸುಂದರಿಯೊಂದಿಗೆ ಮಾವಯ್ಯನ ಮನೆಯಲ್ಲೇ ಸುಖವಾಗಿದ್ದನು.





# ಚಿನ್ನದ ವಿದ್ಯೆ

ಸೀನಯ್ಯ ಮತ್ತು ಸೀತಾರಾಮಯ್ಯ ಇಬ್ಬರೂ ನೆರೆಕರೆಯವರಾಗಿದ್ದರು. ಅವರದು ಸಾಧಾರಣದ ಸ್ಥಿತಿಯೇ. ಚಿನ್ನವನ್ನು ಮಾಡುವ ಒಂದು ವಿದ್ಯೆ ಇರುವುದಾಗಿ ಅವರಿಗೆ ಗೊತ್ತಿತ್ತು. ಅದು ಬಾವಾ ಬೈರಾಗಿಗಳು ರಹಸ್ಯವಾಗಿಟ್ಟುಕೊಂಡಿರುವ ವಿದ್ಯೆಯಂತೆ. ತಾವು ಹೇಗಾದರೂ ಆ ವಿದ್ಯೆಯನ್ನು ಕಲಿತು ಶಾಶ್ವತವಾಗಿ ಬಡತನವನ್ನು ನೀಗಿಕೊಳ್ಳಬೇಕೆಂದು ಇಬ್ಬರಿಗೂ ಅನಿಸಿತು. ಆಂತೆಯೇ ಅವರು ಕಣ್ಣಿಗೆ ಬಿದ್ದ ಪ್ರತಿ ಬೈರಾಗಿಯನ್ನೂ, ಸನ್ಯಾಸಿಯನ್ನೂ "ನಿಮಗೆ ಚಿನ್ನ ಮಾಡುವ ವಿದ್ಯೆಗೊತ್ತೆ ?" ಎಂದು ಕೇಳುತ್ತಿದ್ದರು. ಅವರ ಪ್ರಶ್ನೆಗೆ ಉತ್ತರ ಸಿಕ್ಕಿರಲಿಲ್ಲ.

ಕೆಲವು ದಿನಗಳ ಮೇಲೆ ಅವರ ಅದೃಷ್ಟವೋ ಎಂಬಂತೆ ಒಬ್ಬ ಬೈರಾಗಿ ಅವರ ಪ್ರಶ್ನೆಗೆ, "ಆ ವಿದ್ಯೆ ನಮ್ಮ ಗುರುಗಳಿಗೆ ಗೊತ್ತಿದೆ. ಅವರು ಊರಹೊರಗೆ ಗುಡ್ಡದ ಗುಹೆಯಲ್ಲಿರುತ್ತಾರೆ" ಎಂದನು. ಕೂಡಲೇ ಅವರಿಬ್ಬರೂ ಅವನು ಹೇಳಿದ ಗುರುತಿನ ಮೇರೆಗೆ ಗುಡ್ಡದ ಗುಹೆಗೆ ಹೋಗಿ, ಅಲ್ಲಿದ್ದ ಬೈರಾಗಿಯ ಗುರುವಿನೊಂದಿಗೆ ತಮ್ಮ ಕೋರಿಕೆ ಹೇಳಿಕೊಂಡರು. ಬೈರಾಗಿಗುರು ಮಂದಹಾಸ ಪ್ರದರ್ಶನ ಮಾಡಿ, "ಚಿನ್ನ ಮಾಡುವ ವಿದ್ಯೆ ನನಗೆ ಗೊತ್ತಿರುವುದು ನಿಜ. ಆದರೆ ಗುರುದಕ್ಷಿಣೆಯಾಗಿ ಒಬ್ಬೊಬ್ಬರಿಂದ ಐದೈದು ಚಿನ್ನದ ನಾಣ್ಯ ಪಡೆದುಕೊಂಡರೆ ಹೊರತು ಆ ವಿದ್ಯೆಯನ್ನು ಹೇಳಕೂಡದು. ಈ ಗುರುದಕ್ಷಿಣೆ ಕೊಟ್ಟ ಹೊರತು ಆ ವಿದ್ಯೆ ಫಲಿಸದು" ಎಂದನು.

ಸೀನಯ್ಯನೂ, ಸೀತಾರಾಮಯ್ಯನೂ ತಮ್ಮ ಹತ್ತಿರವಿದ್ದ ಧನದಿಂದ ಐದೈದು ಚಿನ್ನದ ನಾಣ್ಯಗಳನ್ನು ಸಂಪಾದಿಸಿ ತಂದು ಗುರುದಕ್ಷಿಣೆ ಕೊಟ್ಟರು. ಬೈರಾಗಿ ಗುರು ಅದನ್ನು ತೆಗೆದುಕೊಂಡು, "ನಾನು ನಿಮಗೊಂದು ಮಂತ್ರವನ್ನು ಉಪದೇಶ ಮಾಡುತ್ತೇನೆ. ಅದನ್ನು ಕಂಠಪಾಠ ಮಾಡಿಕೊಳ್ಳಿ. ಕಾಗದಲ್ಲಿ ಬರೆದರೆ ಅದರ ಪ್ರಭಾವ ಹೋಗುತ್ತದೆ" ಎಂದು ಹೇಳಿ ಅವರಿಗೊಂದು ಕಠಿನವಾದ ಶ್ಲೋಕವನ್ನು ಹೇಳಿದನು.

ಸೀತಾರಾಮಯ್ಯ ಆ ಶ್ಲೋಕವನ್ನು ಸುಲಭದಲ್ಲಿಯೇ ಸ್ಪಷ್ಟವಾಗಿ ಉಚ್ಚರಿಸಲು ಶಕ್ತನಾದನು. ಆದರೆ ಸೀನಯ್ಯನಿಗೆ ನಾಲಗೆ ಹೊರಳಿಕೊಳ್ಳುತ್ತಿತ್ತು. "ಸ್ವಾಮಿ, ಚಿನ್ನ ಮಾಡುವ ವಿದ್ಯೆ ನನಗೆ ಬರುವ ಹಾಗೆ ಕಾಣುವುದಿಲ್ಲ" ಎಂದ ಮುಖಬಾಡಿಸಿ. ಬೈರಾಗಿಗುರು ಒಂದೆರಡು ಕ್ಷಣ ಆಲೋಚಿಸಿ,

"ವಸುಂಧರ"

"ನಿನ್ನ ದುರದೃಷ್ಟಕ್ಕೆ ನಾನೇನು ಮಾಡಬಲ್ಲೆ? ಆದರೆ ಒಂದು ಸಣ್ಣ ಸಹಾಯ ಮಾಡಿಯೇನು. ಈಗ ಹೇಗೂ ಸೀತಾರಾಮಯ್ಯನ ಮಂತ್ರ ಪಾಠವನ್ನು ಪರೀಕ್ಷಿಸಬೇಕು. ಆ ಪರೀಕ್ಷೆಯಲ್ಲಿ ಸಿಕ್ಕಿದ ಚಿನ್ನವನ್ನು ನೀನೇ ತೆಗೆದುಕೊ" ಎಂದನು.

ಆಮೇಲೆ ಅವನು ಸೀತಾರಾಮಯ್ಯನ ಹತ್ತಿರ, "ಈ ದಿನ ಶುಕ್ಲನವಮಿ. ಇನ್ನು ಮೇಲೆ ನೀನು ಶುಕ್ಲನವಮಿಯ ದಿನವೇ ಚಿನ್ನವನ್ನು ಮಾಡಬೇಕು. ಅಂದರೆ ತಿಂಗಳಿಗೆ ಒಂದೇ ದಿನಮಾತ್ರ. ಅದು ಕೂಡಾ ಒಂದೇಸಾರಿ. ಈ ನಿಯಮವನ್ನು ಪಾಲಿಸದೆ ಹೋದರೆ ನಿನಗೆ ಕೂಡಾ ಮಂತ್ರದಿಂದ ಯಾವ ಉಪಯೋಗವೂ ಇಲ್ಲ" ಎಂದನು.

ಬೈರಾಗಿಗುರು ಎರಡು ಸೇರು ಹಾಲು ಹಿಡಿಯುವ ಒಂದು ಪಾತ್ರದ ತುಂಬ ಮರಳನ್ನು ತುಂಬಿಸಿ ಅದರ ಮೇಲೆ ಎಲೆಯನ್ನು ಮುಚ್ಚಿ, ಕಣ್ಣುಮುಚ್ಚಿ ಮಂತ್ರವನ್ನು ಪಠಿಸುವಂತೆ ಸೀತಾರಾಮಯ್ಯನಿಗೆ ಹೇಳಿದ. ಸೀನಯ್ಯ ಹತ್ತಿರವಿರಬಾರದೆಂದೂ ಹೇಳಿದ. ಸೀತಾರಾಮಯ್ಯ ಮಂತ್ರವನ್ನು ಮುಗಿಸಿ ಪಾತ್ರದ ಮೇಲೆ ಮುಚ್ಚಿದ ಎಲೆಯನ್ನು ತೆಗೆದು ನೋಡಲು, ಪಾತ್ರದಲ್ಲಿ ಮರಳಿಗೆ ಬದಲು ಜಗಜಗನೆ ಹೊಳೆಯುವ ಚಿನ್ನದ ನಾಣ್ಯಗಳಿದ್ದುವು.

ಬೈರಾಗಿ ಗುರು ಆ ಪಾತ್ರವನ್ನು ಸೀನಯ್ಯನಿಗೆ ಕೊಟ್ಟನು. ಅದರೊಳಗಿರುವ ಚಿನ್ನದ ನಾಣ್ಯಗಳನ್ನು ನೋಡಿ ಸೀನಯ್ಯನ ಕಣ್ಣುಗಳು ಥಳಥಳ ಆರಳಿದುವು. ಅದರಿಂದ ತನ್ನ ಜೀವನವೆಲ್ಲಾ ಎಷ್ಟೋ ಸುಖದಿಂದ ಕಳೆಯಬಹುದೆಂದು ಸಂತೋಷದ ಕಲ್ಪನೆಗಳಿಂದ ಉಬ್ಬಿದನು.

ತರುವಾಯ ಬೈರಾಗಿ ಗುರು ಅವರಿಬ್ಬರನ್ನೂ ಉದ್ದೇಶಿಸಿ, "ನಾನಿಲ್ಲಿ ತುಂಬ ದಿನಗಳವರೆಗೆ ಇರುವವನಲ್ಲ. ಆದರೂ ಚಿಂತಿಸಬೇಡಿ. ನಿಮಗೇನಾದರೂ ಸಂದೇಹ ಬಂದರೆ ಈ ಗುಹೆಗೆ ಬನ್ನಿ. ನಿಮ್ಮ




ಸಂದೇಹಗಳು ನಿವೃತ್ತಿಯಾಗುವ ಸೂತ್ರಗಳನ್ನು ಏರ್ಪಡಿಸಿಯೇ ನಾನು ಹೋಗುತ್ತೇನೆ. ಇನ್ನು ಹೋಗಿಬನ್ನಿ" ಎಂದನು.

ಅವನಿಂದ ಅಪ್ಪಣೆ ಪಡೆದುಕೊಂಡು ಸೀತಾರಾಮಯ್ಯನೂ ಸೀನಯ್ಯನೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ಬೈರಾಗಿ ಗುರು ಹೇಳಿದಂತೆ ಕೊಟ್ಟ ಆ ಪಾತ್ರ ಸೀನಯ್ಯನ ಹತ್ತಿರವೇ ಇತ್ತು. ಅವನು ಆ ಪಾತ್ರಕ್ಕೆ ಬಾಯಿಬಿಗಿದು ಮನೆಯ ಹಿಂದೆ ರಹಸ್ಯವಾದೊಂದು ಕಡೆ ಹುಗಿದಿಟ್ಟನು.

ಸೀತಾರಾಮಯ್ಯ ಮತ್ತೆ ಶುಕ್ಲ ನವಮಿಯನ್ನು ಆತುರದಿಂದ ಎದುರು ನೋಡುತ್ತಾ, ಆ ದಿನ ಬಂದ ಕೂಡಲೇ ದೊಡ್ಡದೊಂದು ಗಂಗಾಳದ ತುಂಬಾ ಮರಳನ್ನು ತುಂಬಿದನು. ಅದರ ಮೇಲೆ ಎಲೆಯನ್ನು ಮುಚ್ಚಿ ಕಣ್ಣುಮುಚ್ಚಿಕೊಂಡು ಬೈರಾಗಿ ಗುರು ಹೇಳಿದ ಮಂತ್ರವನ್ನು ಪಠಿಸಿದನು. ಆಮೇಲೆ ಎಲೆಯನ್ನು ತೆಗೆದು ನೋಡುವಾಗ ಮರಳು ಇದ್ದ

ಹಾಗೆಯೇ ಇದ್ದಿತು. ಗಂಗಾಳವನ್ನು ಅಲುಗಿಸಿ, ಮಗುಚಿ, ಕೆದಕಿ, ಕಡೆಗೆ ಹೊರಳಿಸಿ ಹಾಕಿದರೂ ಒಂದು ಪುಟ್ಟ ಚಿನ್ನದ ಕಸ ಸಹಾ ಸಿಗಲಿಲ್ಲ. ಸೀತಾ ರಾಮಯ್ಯ ತುಂಬ ಗಾಬರಿಯಾಗಿ ಸೀನಯ್ಯನ ಮನೆಗೆ ಓಡಿದ. ಅವನು ಹೇಳಿದುದನ್ನೆಲ್ಲಾ ಕೇಳಿ ಸೀನಯ್ಯ "ನೀನು ಮಂತ್ರವನ್ನು ಸ್ಪಷ್ಟವಾಗಿ ಹೇಳಿರ ಲಿಕ್ಕಿಲ್ಲ. ಅದು ಬಹಳ ಕಷ್ಟ ಶಬ್ದಗಳಿರುವ ಮಂತ್ರ ವಾಯಿತಲ್ಲಾ!" ಎಂದನು.

"ನಾನು ಅಮರಕೋಶ ಬಾಯಿಪಾಠ ಮಾಡಿದವ ನಾದುದರಿಂದ, ಮಂತ್ರವನ್ನು ತುಂಬ ಸ್ಪಷ್ಟವಾಗಿ ತಪ್ಪಿಲ್ಲದೆ ಹೇಳುತ್ತೇನೆ. ಅದರಲ್ಲಿ ಸಂದೇಹವೇ ಇಲ್ಲ" ಎಂದ ಸೀತಾರಾಮಯ್ಯ.

"ಹಾಗಾದರೆ ನೀನು ಆತ್ಮಾಶೆಗೆ ಹೋಗಿ ದೊಡ್ಡ ಗಂಗಾಳವಿಟ್ಟದ್ದೇ ತಪ್ಪಾಗಿದ್ದೀತು. ಅಷ್ಟಕ್ಕೂ ಪ್ರಭಾವ ಬೀರಲು ಮಂತ್ರಕ್ಕೆ ಶಕ್ತಿ ಸಾಲದಿರಬಹುದು. ಆದರೂ ಸೀತಾರಾಮಯ್ಯ, ನಿನಗೆ ಒಂದು ಸಣ್ಣ ಚೊಂಬಿನಷ್ಟು ಚಿನ್ನ ಸಾಲದೇನಪ್ಪಾ? ಹೋಗಲಿ, ನಾನು ಮಾತ್ರ ಎರಡು ಸೇರು ಪಾತ್ರದ ಚಿನ್ನವನ್ನೇನು ಮಾಡೇನು? ಒಂದು ಪಾವಿನಷ್ಟು ನಿನಗೂ ಕೊಡುತ್ತೇನೆ. ತೃಪ್ತನಾಗು." ಎಂದ ಸೀನಯ್ಯ.

ಅವನು ತಾನು ಹುಗಿದಿಟ್ಟ ಪಾತ್ರವನ್ನು ತೆಗೆದು ನೋಡಿದನು. ಅದರಲ್ಲಿದ್ದ ನಾಣ್ಯಗಳು ಹೊಳೆಯು ತ್ತಿರಲಿಲ್ಲ. ಇಬ್ಬರೂ ಕೂಡಿ ಆ ನಾಣ್ಯಗಳನ್ನು ತೆಗೆದು ಕೊಂಡು ಹೋಗಿ ಅಕ್ಕಸಾಲಿಗನಿಗೆ ತೋರಿಸಿದರು.

"ಛೀ ಛೀ! ಇದು ಚಿನ್ನದ ನಾಣ್ಯ-ಯಾಕಾದೀತು? ಒಂದು ಚಿನ್ನದ ನಾಣ್ಯದ ಬೆಲೆಯಲ್ಲಿ ಇಂಥಾದ್ದು ಹತ್ತು ಸಾವಿರ ನಾಣ್ಯ ಮಾಡಬಹುದು." ಎಂದ ಅಕ್ಕಸಾಲಿಗ.

ಮಿತ್ರರಿಬ್ಬರೂ ಹತಾಶರಾದರು. ಈ ಮೋಸ ವನ್ನು ಕುರಿತು ತಿಳಿದುಕೊಳ್ಳಬೇಕೆಂದು ಇಬ್ಬರೂ ಗುಡ್ಡದ ಗುಹೆಗೆ ಹೋದರು. ಅಲ್ಲಿ ಯಾರೂ ಇರಲಿಲ್ಲ. ಗುಹೆಯಲ್ಲಿ ಒಂದು ಕಾಗದದ ಮೇಲೆ ಕಲ್ಲನ್ನು ಭಾರಕ್ಕೆ ಇಡಲಾಗಿತ್ತು. ಆ ಕಾಗದದಲ್ಲಿ ಹೀಗೆ ಬರೆಯಲ್ಪಟ್ಟಿತ್ತು:

"ಅಯ್ಯಗಳಿರಾ, ಮಂತ್ರಗಳಿಂದ ಯಾವ ವಸ್ತುವೂ ಚಿನ್ನವಾಗುವುದಿಲ್ಲ. ಚಿನ್ನದ ವಿದ್ಯೆ ಎಂದರೆ ಕಷ್ಟಪಟ್ಟು ದುಡಿಯುವುದೇ. ಕೆಲಸ ಮಾಡದೆ ಯಾರಿಗೂ ಚಿನ್ನವು ಸಿಕ್ಕದು. ಕಷ್ಟಪಡದೆ ಚಿನ್ನ ಗಳಿಸಲು ಬುದ್ಧಿವಂತಿಕೆಯಿಂದ ಸಾಧ್ಯವಿದೆ. ಇತರರ ಬುದ್ಧಿಗೇಡಿತನವನ್ನು ಚಿನ್ನವನ್ನಾಗಿ ಬದಲಾಯಿಸ ಬಹುದು. ಅದೇ ನಾನು ತೋರಿಸಿದ ಚಿನ್ನದ ವಿದ್ಯೆ. ನೀವು ಕೂಡಾ ಚಿನ್ನವನ್ನು ಮಾಡಲಿಕ್ಕೆ ನಿಮಗಿಂತ ಕಡಿಮೆ ಬುದ್ಧಿಯುವರನ್ನು ಹುಡುಕಿಕೊಳ್ಳಿ. ಇದೇ ನಾನು ಉಪದೇಶಿಸುವ ನಿಜವಾದ ಚಿನ್ನದ ಮಂತ್ರ."





# ಅತ್ತರು ಸಾಹೇಬ

ಒಂದು ಊರಿನಲ್ಲಿ ಅಮೀರ್ ಮತ್ತು ಹಸನ್ ಎಂಬ ಸ್ನೇಹಿತರಿದ್ದರು. ಸ್ನೇಹಿತರಾಗಿದ್ದರೂ ಇಬ್ಬರೂ ಒಂದೇ ರೀತಿಯ ಗುಣದವರಾಗಿರಲಿಲ್ಲ.

ಅಮೀರನಿಗೆ ಸೋಮಾರಿತನ ಹೆಚ್ಚು. ಆದರ ಮೇಲೆ ಏನೋ ಒಂದು ಸಮಸ್ಯೆಯಲ್ಲಿ ಸಿಕ್ಕಿಕೊಂಡು ಅದರಿಂದ ಹೊರ ಬೀಳಲಾರದೆ ಒದ್ದಾಡುವನು. ಆಗ ಹಸನ್ ಬಂದು ಅವನನ್ನು ಕಾಪಾಡಬೇಕಾಗಿ ಬರುತ್ತಿತ್ತು. ಆದರೂ ಇಬ್ಬರ ಸ್ನೇಹಕ್ಕೂ ಯಾವ ಭಂಗವೂ ಬಂದಿರಲಿಲ್ಲ.

ಒಂದುಸಾರಿ ಅವರಿಬ್ಬರೂ ಏನಾದರೂ ವ್ಯಾಪಾರ ಮಾಡಿ ಸ್ವಲ್ಪ ಲಾಭವನ್ನು ಕೂಡ ಹಾಕಿ ಮದುವೆ ಮಾಡಿಕೊಳ್ಳಬೇಕೆಂದು ಆಲೋಚನೆ ಮಾಡಿದರು. ವ್ಯಾಪಾರಕ್ಕೆ ಸ್ವಲ್ಪ ಮೂಲಧನ ಬೇಕಿತ್ತು. ಆದುದರಿಂದ ಇಬ್ಬರೂ ತಮ್ಮ ತಮ್ಮ ಹಳೆಯ ಮನೆಗಳನ್ನು ಮಾರಿ, ಬಂದ ಧನದಿಂದ ಬಗೆಬಗೆಯ ಅತ್ತರುಗಳನ್ನು ಕೊಂಡುಕೊಂಡು, ಆ ಸೀಸೆಗಳನ್ನು ಎರಡು ಚರ್ಮದ ಪೆಟ್ಟಿಗೆಗಳಲ್ಲಿ ಹಾಕಿಕೊಂಡರು. ಆಮೇಲೆ ಅವರಿಬ್ಬರೂ ತಮ್ಮ ತಮ್ಮ ಪೆಟ್ಟಿಗೆ ಎತ್ತಿಕೊಂಡು ಅವುಗಳನ್ನು ಆದಷ್ಟು ಲಾಭಕ್ಕೆ ಮಾರಿ ಕೊಂಡು ಬರಲು ಬೇರೆ ಬೇರೆ ಕಡೆಗೆ ಹೊರಟರು. ಅಮೀರ್ ಪೂರ್ವದಿಕ್ಕಿಗೆಹೊರಟನು. ಅವನು ದಿನವಿಡೀ ಕಾಡುದಾರಿಯಲ್ಲಿ ಪ್ರಯಾಣಮಾಡಿ ಕತ್ತಲೆಯಾಗುವ ಹೊತ್ತಿಗೆ ಕಾಡಿನ ಕಡೇಭಾಗವನ್ನು ಸೇರಿದನು. ಈ ಕಾಡು ದಾಟಿದ ಮೇಲೆ ದೊಡ್ಡ ದೊಡ್ಡ ಊರುಗಳು ಬರುತ್ತವೆ.

ಅವನಿಗೆ ತನ್ನ ಶರೀರವೆಲ್ಲ ಬೆವತು ದುಸ್ತುಗಳೆಲ್ಲ ಬೆವರು ವಾಸನೆ ಹೊಡೆಯುತ್ತಿರುವಂತೆ ಅನಿಸಿತು. ಅತ್ತರು ಸಾಹೇಬನೆಂದ ಮೇಲೆ ತನ್ನ ಶರೀರದ ಪರಿಮಳ ದೂರದಿಂದಲೇ ಜನರ ಮೂಗಿಗೆ ತಲಪಬೇಕು. ಅದಕ್ಕೆ ಬದಲಾಗಿ ಈ ಬೆವರಿನ ವಾಸನೆ ಹೊರಡುವುದೆಂದರೆ ಇದು ವ್ಯಾಪಾರ ಧರ್ಮಕ್ಕೆ ವಿರುದ್ಧವಾದುದೆಂದು ಅವನಿಗೆ ತೋರಿತು.

ಆದುದರಿಂದ ಅಮೀರ್ ಒಂದು ಆಲದ ಮರದ ಬುಡದಲ್ಲಿ ಕುಳಿತು, ಚರ್ಮದ ಪೆಟ್ಟಿಗೆಯನ್ನು ತೆರೆದು, ಒಂದು ಅತ್ತರು ಸೀಸೆಯನ್ನು ತೆಗೆದು ಹೊರಗಿಟ್ಟು, ಅದರಲ್ಲಿಷ್ಟು ಹತ್ತಿಯನ್ನು ಅದ್ದಿ ತನ್ನ ಬಟ್ಟೆಬರೆಗಳಿಗೆ ಅಲ್ಲಲ್ಲಿ ಹಚ್ಚಿಕೊಳ್ಳತೊಡಗಿದನು. ಸುತ್ತುಮುತ್ತಲೂ ಅತ್ತರಿನ ಗಮಗಮ ಹರಡಿತು.

ಎಂ. ಕೆ. ಈಶ್ವರರಾವ್



ಅಷ್ಟರಲ್ಲಿ ಆಲದಮರದ ಬೀಳಲು ಗಲಗಲನೆ ಅಲುಗಾಡಿದುವು. ಮರುಕ್ಷಣದಲ್ಲಿ ದೊಡ್ಡದೊಂದು ಸ್ತ್ರೀಯ ಆಕಾರವು ಅಮೀರನ ಮುಂದೆ ಪ್ರತ್ಯಕ್ಷವಾಗಿ "ಏನು ಮಾಡುತ್ತೀ?" ಎಂದು ಕೇಳಿತು.

ಅದೊಂದು ದೆವ್ವವೆಂದು ತಿಳಿದು ಅಮೀರ್ ಧೈರ್ಯದಿಂದ ಕೋಪ ತಂದುಕೊಂಡು, "ಕಾಣೋದಿಲ್ಲೇನು? ಕಣ್ಣು ಕುರುಡೆ? ಅತ್ತರು ಹಚ್ಚಿಕೊಳ್ಳುತ್ತಿದ್ದೇನೆ, ಅತ್ತರು!" ಎಂದನು.

"ಆಹ! ಏನು ಗಮಗಮ! ನನಗೂ ಇಷ್ಟು ಹಚ್ಚಲಾರೆಯಾ?" ಎಂದಿತು ಆ ದೆವ್ವ.

"ನಿನಗೆ ಒಬ್ಬರು ಹಚ್ಚಬೇಕೇನು? ನಿನ್ನಂಥವರ ವಿಷಯ ತುಂಬಾ ಕೇಳಿಬಲ್ಲೆ. ನಿನಗೆ ಮನಸ್ಸಾದರೆ ಹೇಗೆ ಬೇಕಾದರೂ ಬದಲಾಯಿಸುತ್ತೀಯಂತೆ! ಅತ್ತರು ಬೇಕಾಗಿದ್ದರೆ ಸಣ್ಣರೂಪದಲ್ಲಿ ಅತ್ತರು ಸೀಸೆಯೊಳಗೆ ಹೊಕ್ಕು ಶರೀರಕ್ಕೆಲ್ಲ ಹಚ್ಚಿಕೊಂಡು ಮೇಲೆ ಬಾ!" ಎಂದ ಅಮೀರ್.

ಕೂಡಲೇ ದೆವ್ವವು ಪುಟ್ಟ ರೂಪತಾಳಿ ಸೀಸೆಯೊಳಗೆ ತೂರಿದಂತೆ ಗೊತ್ತಾಯಿತು. ತತ್‌ಕ್ಷಣವೇ ಅಮೀರನು ಸೀಸೆಗೆ ಬಿರಡೆ ಮುಚ್ಚಿ ಬಂದುಮಾಡಿ, ಚರ್ಮದ ಪೆಟ್ಟಿಗೆಯೊಳಗಿಟ್ಟುಬಿಟ್ಟನು. ಆಮೇಲೆ ಅಲ್ಲಿಂದೆದ್ದು ಪ್ರಯಾಣ ಮುಂದುವರಿಸಿ, ಚೆನ್ನಾಗಿ ಕತ್ತಲೆ ಬೀಳುವಷ್ಟರಲ್ಲಿ ಒಂದು ಗ್ರಾಮವನ್ನು ತಲಪಿದನು.

ಆ ರಾತ್ರಿಯನ್ನು ಅವನು ಆ ಗ್ರಾಮದಲ್ಲಿ ಕಳೆಯುತ್ತಿದ್ದಾಗ ಅವನಿಗೊಂದು ಆಲೋಚನೆಯುಂಟಾಯಿತು. ತನ್ನಬಳಿಯಲ್ಲಿರುವ ಅತ್ತರು ಸೀಸೆಗಳನ್ನು ಊರೂರು ತಿರುಗಿ ಮಾರುತ್ತಾಹೋದರೆ ಯಾವ ಕಾಲಕ್ಕೆ ಮುಗಿದೀತೋ? ಎಲ್ಲೆಲ್ಲಿ ಅಲೆದು ಕಾಲು ಸವೆಸಬೇಕಾದೀತೋ?

ಇನ್ನೂ ಎರಡು ದಿನ ಪ್ರಯಾಣ ಮಾಡಿದರೆ ರಾಜಧಾನಿ ಬರುತ್ತದಂತೆ. ರಾಜನ ಮಗಳಿಗೆ ಮದುವೆ ಕೂಡಾ ಆಗಲಿದೆಯಂತೆ. ತನ್ನ ಬಳಿಯಲ್ಲಿರುವ ಎಲ್ಲಾ ಅತ್ತರುಗಳನ್ನೂ ರಾಜನಿಗೆ ಕಾಣಿಕೆಯಾಗಿಕೊಟ್ಟರೂ ಅವರು ಕೊಡುವ ಬಹುಮಾನವೇ ಜೀವಮಾನಕ್ಕೆ ಸಾಲುವಷ್ಟಾದೀತು. ಮನೆ ಮನೆ ತಿರುಗುವುದು ಕಷ್ಟವಷ್ಟೆ.

ಹೀಗೆಂದುಕೊಂಡು ಅಮೀರ್ ನೆಟ್ಟಗೆ ರಾಜಧಾನಿಗೆ ಹೋಗಿ, ರಾಜನ ದರ್ಶನಕ್ಕಾಗಿ ದೂರದೇಶದಿಂದ ಅತ್ತರು ಸಾಹೇಬನೊಬ್ಬ ಬಂದಿದ್ದಾನೆಂದು ರಾಜನಿಗೆ ಸುದ್ದಿ ಕಳುಹಿಸಿದನು. ಅವನಿಗೆ ರಾಜನ ದರ್ಶನವೂ ಆಯಿತು.

ಕೂಡಲೇ ಅವನು ವಿನಯದಿಂದ ರಾಜನ ಮುಂದೆ ಅತ್ತರಿನ ಸೀಸೆಗಳನ್ನೆಲ್ಲ ಇಟ್ಟು, ಇವು ರಾಜಕುಮಾರಿಯ ವಿವಾಹ ಸಂದರ್ಭದಲ್ಲಿ ತಾನು ಸಮರ್ಪಿಸಿಕೊಳ್ಳುವ ಕಾಣಿಕೆಯೆಂದೂ ಹೇಳಿದನು.

ರಾಜನು ತನ್ನ ಕುಮಾರಿಯನ್ನು ಕರೆದು ಈ ಅತ್ತರುಗಳೆಲ್ಲ ಹೇಗಿದೆಯೆಂದು ನೋಡಲು ಹೇಳಿದನು. ಅವಳು ಒಂದು ಸೀಸೆಯ ಬಿರಡೆಯನ್ನು

ತೆಗೆದು ಅದರಲ್ಲಿದ್ದ ಅತ್ತರಿನ ವಾಸನೆಯನ್ನು ನೋಡಿ, ಬುದ್ಧಿ ಕೆಟ್ಟವಳಂತೆ ನಗುತ್ತ, ನಲಿಯುತ್ತ, "ಹಾಯ್! ಹಾಯ್! ನನಗೇ ಮದುವೇ! ಮದುವೇ! ನಲವತ್ತು ವರ್ಷದ ಮೇಲೆ ಮತ್ತೆ ಗಂಡಾ!..." ಎಂದು ಹರಟುತ್ತಾ ಅಷ್ಟೆತ್ತರಕ್ಕೆ ಹಾರ ತೊಡಗಿದಳು.

ಮುಗ್ಧ ಹುಡುಗಿಯಾಗಿದ್ದ ತನ್ನ ಕುಮಾರಿ ಆಕಸ್ಮಿಕವಾಗಿ ಹೀಗೆ ಹುಚ್ಚಿಯಾಗಲು ಅಮೀರನೇ ಕಾರಣವೆಂದು ತಿಳಿದು ರಾಜನು ಕೋಪದಿಂದ ಕೆಂಡವಾಗಿ, "ಮೊದಲು ಈ ನೀಚನನ್ನು ಸೆರೆಮನೆಗೆ ಹಾಕಿರಿ!" ಎಂದು ಭಟರಿಗೆ ಆಜ್ಞೆಮಾಡಿದನು. ಮರುನಿಮಿಷದಲ್ಲಿ ಅಮೀರ ಬಂದೀಖಾನೆಯ ಕತ್ತಲೆಯಲ್ಲಿ ಬಿದ್ದನು.

ಸೆರೆಮನೆಯಲ್ಲಿರುವಾಗ ನಡೆದ ಸಂಗತಿ ಏನೆಂಬುದು ಅಮೀರನಿಗೆ ಅರ್ಥವಾಯಿತು. ಇದಿಷ್ಟಕ್ಕೂ ತಾನು ದೆವ್ವದ ಸೀಸೆಯನ್ನು ಮರೆತದ್ದೇ ಕಾರಣ! ರಾಜಕುಮಾರಿ ದೆವ್ವಹೊಕ್ಕ ಅತ್ತರು ಸೀಸೆಯ ಬಿರಡೆಯನ್ನೇ ತೆಗೆದಿರಬೇಕು. ಆ ದೆವ್ವವೇ ಹೊರಗೆ ಬಂದು ಅವಳನ್ನು ಹಿಡಿದಿದೆ. ಎಲ್ಲಿಯೋ ಕಾಡಿನಲ್ಲಿದ್ದ ಆ ಹಾಳು ದೆವ್ವಕ್ಕೆ ರಾಣೀವಾಸದ ಸುಖ ಸಿಕ್ಕಿಬಿಟ್ಟಿದೆ. ಇನ್ನು ಅದು ರಾಜಕುಮಾರಿಯನ್ನು ಬಿಟ್ಟು ಹೋಗಲಾರದು. ಅದು ಹೋಗದೆ ತನಗೆ ಬಂದೀಖಾನೆಯ ಬಿಡುಗಡೆಯೂ ಆಗಲಾರದು.

ಅವನು ಏನೋ ಆಲೋಚಿಸಿ, "ನಾನು ರಾಜಕುಮಾರಿಗೆ ಸ್ವಸ್ಥವಾಗುವಂತಹ ಉಪಾಯ ಹೇಳುತ್ತೇನೆ." ಎಂದು ಸೆರೆಮನೆಯ ಅಧಿಕಾರಿಯಮೂಲಕವಾಗಿ ರಾಜನಿಗೆ ಸುದ್ದಿ ಕಳುಹಿಸಿದನು.

ರಾಜನು ಅಮೀರನನ್ನು ಭಟರ ಮೂಲಕ ತನ್ನ ಬಳಿಗೆ ಕರೆಯಿಸಿ, "ಏನು ನೀನು ಹೇಳುವ ಉಪಾಯ?" ಎಂದು ಕೇಳಿದ. "ಮಹಾಪ್ರಭುಗಳೇ, ತಮ್ಮ ಕುಮಾರಿ ರಾಣಿಯವರನ್ನು ಒಂದು



ದೆವ್ವ ಹಿಡಿದಿದೆ ಎನ್ನಲು ಸಂಶಯವಿಲ್ಲ. ನಾನು ಆ ದೆವ್ವವನ್ನು ಒಂದು ಅತ್ತರಿನ ಸೀಸೆಯೊಳಗೆ ಬಂಧಿಸಿಟ್ಟಿದ್ದೆ. ದುರದೃಷ್ಟದಿಂದ ಕುಮಾರಿ ರಾಣಿಯವರು ಅದರದ್ದೇ ಬಿರಡೆ ತೆಗೆದುಬಿಟ್ಟರು. ಆದುದರಿಂದ ತಾವು ಕುಮಾರಿ ರಾಣಿಯನ್ನು ನನಗೆ ಕೊಟ್ಟು ಮದುವೆ ಮಾಡಿಬಿಟ್ಟರೆ, ಆ ದೆವ್ವಕ್ಕೆ ಕಾಡಿನ ಬದುಕೇ ಒಳ್ಳೇದಿದೆ ಅನಿಸುವ ಹಾಗೆ ಮಾಡಿ ಬಿಡುತ್ತೇನೆ. ಆಗ ಅದು ಕುಮಾರಿ ರಾಣಿಯನ್ನು ಬಿಟ್ಟು ಓಡಿಹೋಗುತ್ತದೆ. ಹಾಗಿಲ್ಲದಿದ್ದರೆ ಈ ರಾಜಗೃಹದ ಸುಖಗಳನ್ನು ಬಿಟ್ಟು ಅದು ಹೋಗಲಾರದು." ಎಂದನು ಅಮೀರ.

ಈ ಮಾತುಗಳನ್ನು ಕೇಳಿ ರಾಜನಿಗೆ ಮತ್ತಷ್ಟು ಸಿಟ್ಟೇ ಬಂದಿತು. ಅದುವರೆಗೂ ರಾಜನಿಗೆ ಈ ಅತ್ತರು ಸಾಹೇಬನ ಉದ್ದೇಶವೇನೆಂಬುದು ಗೊತ್ತಿರಲಿಲ್ಲ. ಅದೀಗ ತಿಳಿಯಿತು! ರಾಜಕುಮಾರಿಯನ್ನು ಮದುವೆಯಾಗಬೇಕೇ ಈ ಧೂರ್ತನಿಗೆ!

"ಅಮಾವಾಸ್ಯೆಯ ದಿನ ಈ ಘಾತುಕನನ್ನು ಗಲ್ಲಿಗೇರಿಸಿಬಿಡಿ!" ಎಂದು ರಾಜನು ಭಟರಿಗೆ ಆಜ್ಞೆ ಮಾಡಿದನು.

ಅಮಾವಾಸ್ಯೆಗೆ ಇನ್ನೂ ನಾಲ್ಕು ದಿನಗಳಷ್ಟೇ ಇರುವುದು. ಅಮೀರ್ ರಾಜಭಟರನ್ನು ಅಂಗಲಾಚಿ, ಬೇಡಿ, ತನ್ನ ಸುದ್ದಿ ತನ್ನ ಸ್ನೇಹಿತನಾದ ಹಸನನಿಗೆ ತಿಳಿಯುವಂತೆ ಮಾಡಿದನು.

ತನ್ನ ಮಿತ್ರನ ಸಮಾಚಾರ ತಿಳಿದ ಕೂಡಲೇ ಹಸನ್ ರೆಕ್ಕೆಕಟ್ಟಿಕೊಂಡ ಹಾಗೆ ಓಡಿ ಬಂದು, ಸೆರೆಮನೆಯಲ್ಲಿರುವ ಅಮೀರ್‌ನನ್ನು ನೋಡಿ, ಅವನ ಕುತ್ತಿಗೆಗೆ ಬಂದಿರುವ ಸಮಸ್ಯೆ ಏನೆಂಬುದನ್ನು ಅರ್ಥ ಮಾಡಿಕೊಂಡನು.

ಆಮೇಲೆ ಹಸನ್ ನೆಟ್ಟಗೆ ರಾಜನ ಬಳಿಗೆ ಹೋಗಿ, ರಾಜಕುಮಾರಿಗೆ ಹಿಡಿದ ದೆವ್ವವನ್ನು ತಾನು ಬಿಡಿಸುವೆನೆಂದು ಮಾತುಕೊಟ್ಟನು.

ಅದುವರೆಗೆ ನಡೆಸಿದ ವೈದ್ಯ ಮಂತ್ರಗಳೆಲ್ಲ ನಿಷ್ಪ್ರಯೋಜನವಾಗಿ, ಚಿಂತೆಯಲ್ಲಿದ್ದ ರಾಜ ಬೇಸರದಿಂದ "ನೀನೇನು ಮಾಡುವಿ? ಅವಳನ್ನು ನಿನಗೆ ಕೊಟ್ಟು ಮದುವೆ ಮಾಡಬೇಕೇನು?" ಎಂದು ಕೇಳಿದ.

"ಅದೇನೂ ಬೇಡ. ಆದರೆ ನಾನು ರಾಜಕುಮಾರಿಯ ಸಮಕ್ಷಮದಲ್ಲಿ ಏನು ಮಾತಾಡಿದರೂ ನನ್ನ ಮಾತಿಗೆ ಅಡ್ಡ ಬರಬಾರದು; ತಡೆಹೇಳಲೂ ಕೂಡದು. ಮೊದಲು ಒಂದಾಳೆತ್ತರದ ಜಾಡಿ ಬೇಕು. ಅದಕ್ಕೆ ಮುಚ್ಚಳವಿರಬೇಕು" ಎಂದ ಹಸನ್.

ಅವನ ಮಾತಿನಲ್ಲಿ ಏನೋ ಹುರುಳಿರುವಂತೆ ತೋರಿ, ರಾಜನು ಅವನು ಹೇಳಿದಂತಿರುವ ದೊಡ್ಡದೊಂದು ಜಾಡಿಯನ್ನು ತರಿಸಿದನು. ಹಸನ್ ಅದನ್ನು ರಾಜಕುಮಾರಿಯ ಹತ್ತಿರದಲ್ಲಿ ಇಡಿಸಿ, "ರಾಜಕುಮಾರಿಯನ್ನು ಈ ಜಾಡಿಯಲ್ಲಿರಿಸಿ, ಮುಚ್ಚಳ ಮುಚ್ಚಿಬಿಡಿ!" ಎಂದನು ಜೋರಾಗಿ.

ಮರುಕ್ಷಣದಲ್ಲಿ ರಾಜಕುಮಾರಿ ಕಿರ್ರನೆ ಕಿರುಚಿ, "ಬೇಡ" ಎನ್ನುತ್ತ ಧಡೀರನೆ ಬಿದ್ದಳು. ತನಗೆ ಮತ್ತೆ ಬಂದೀಖಾನೆಯೇ ಗತಿಯಾಗುವುದೆಂದು ಹೆದರಿ ದೆವ್ವವು ಅವಳನ್ನು ಬಿಟ್ಟು ಓಡಿಹೋಯಿತು.

ಆಮೇಲೆ ರಾಜಕುಮಾರಿ ಮೈಮುರಿದು ನಿದ್ದೆಯಿಂದೆದ್ದವಳಂತೆ ಎದ್ದಳು. ಈಗ ಅವಳು ಮೊದಲಿನಂತೆಯೇ ಆಗಿಬಿಟ್ಟಳು. ರಾಜನ ಸಂತೋಷಕ್ಕೆ ಪಾರವಿರಲಿಲ್ಲ. ಅವನು ಹಸನ್‌ನಿಗೆ ದೊಡ್ಡ ಬಹುಮಾನ ಕೊಟ್ಟದು ಮಾತ್ರವಲ್ಲ, ಅವನ ಕೋರಿಕೆಯಂತೆ ಅಮೀರನನ್ನು ಬಿಡುಗಡೆಮಾಡಿ, ಅವನಿಗೆ ಕೂಡಾ ಸಣ್ಣ ಸನ್ಮಾನ ಕೊಟ್ಟನು.

ಆಮೇಲೆ ಆ ಸ್ನೇಹಿತರು ತಮ್ಮ ಗ್ರಾಮಕ್ಕೆ ಹೋಗಿ ಮದುವೆ ಮಾಡಿಕೊಂಡು ರಾಜನು ಕೊಟ್ಟ ಸನ್ಮಾನದಿಂದ ಸುಖವಾಗಿದ್ದರು.



# ತಾರುಮಾರು

ರಾಮಶಾಸ್ತ್ರಿ ಎಂಬ ಪಂಡಿತನು ಸಂತಾನವಿಲ್ಲದೆ ಗಿರಿನಾಥನೆಂಬ ಹುಡುಗನನ್ನು ತಂದು ಬೆಳೆಸಿಕೊಳ್ಳುತ್ತಿದ್ದ. ಆಮೇಲೆ ಅವನಿಗೆ ನಿಜವಾಗಿಯೇ ಒಬ್ಬ ಮಗ ಹುಟ್ಟಿದ. ಉಪಾಯವಿಲ್ಲದೆ ರಾಮಶಾಸ್ತ್ರಿ ತನ್ನ ಸಾಕು ಮಗನನ್ನು ಮನೆಗೆಲಸದವನನ್ನಾಗಿ ಮಾಡಿದ. ಅವನಿಗೆ ಓದುಬರೆಹವೇನೂ ಕಲಿಸದೆ, ತನ್ನ ಸ್ವಂತ ಮಗನನ್ನು ಮಾತ್ರ ದೊಡ್ಡ ಪಂಡಿತನಾಗುವಂತೆ ಓದಿಸಿದ.

ಗಿರಿನಾಥನು ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತಿದ್ದ. ಒಂದು ಸಾರಿ ಒಬ್ಬ ಜಮೀನುದಾರನು ತನ್ನ ಹುಟ್ಟುಹಬ್ಬದ ವೇಳೆಯಲ್ಲಿ ಕವಿಗಳಿಗೂ ಕಲೆಗಾರರಿಗೂ ಸನ್ಮಾನ ಮಾಡುವುದಾಗಿ ಪ್ರಕಟಿಸಿದ. ರಾಮಶಾಸ್ತ್ರಿ ದೊಡ್ಡ ಪಂಡಿತನಾದ ತನ್ನ ಸ್ವಂತ ಮಗನನ್ನು ಕರೆದುಕೊಂಡು ಅಲ್ಲಿಗೆ ಹೋದ. ಗಿರಿನಾಥ ತಾನು ಬರೆದ ಚಿತ್ರವನ್ನು ತೆಗೆದುಕೊಂಡು ಹೋಗಿದ್ದ.

ಜಮೀನುದಾರನು ಎಲ್ಲ ಕಲೆಗಾರರನ್ನೂ ಪರೀಕ್ಷಿಸಿ, ಅವರಿಗೆ ಮರುದಿನ ಕೊಡತಕ್ಕ ಬಹುಮಾನಗಳಿಗಾಗಿ ಏನೇನೋ ಸಂಕೇತ ಗುರುತುಗಳನ್ನು ಕೊಡಿಸಿದನು. ರಾಮಶಾಸ್ತ್ರಿಯ ಸ್ವಂತ ಮಗನಿಗೆ ಒಂದು ನೀಲಿ ಬಣ್ಣದ ಹೂವು ಸಿಕ್ಕಿತು. ಗಿರಿನಾಥನ ಕೈಗೆ ಕೆಂಪು ಹೂ ಕೊಡಲಾಯಿತು. ಕೆಂಪು ಹೂವು ಬೇರೆ ಯಾರಿಗೂ ಬಾರದುದರಿಂದ ಗಿರಿನಾಥನು ಸಂತೋಷಪಡುವುದನ್ನು ನೋಡಿ ರಾಮಶಾಸ್ತ್ರಿ ಅಸೂಯೆಪಟ್ಟು, ಮರುದಿನ ಬೆಳಿಗ್ಗೆ ತನ್ನ ಸ್ವಂತ ಮಗನಿಗೆ ಆ ಕೆಂಪು ಹೂವನ್ನು ಕೊಡಿಸಿ, ಅವನ ಕೈಯಲ್ಲಿದ್ದ ನೀಲಿ ಹೂವನು ಗಿರಿನಾಥನಿಗೆ ಕೊಟ್ಟು ತೃಪ್ತನಾದನು.

ಮರುದಿನ ಕೆಂಪು ಹೂ ನೋಡಿದ ಕೂಡಲೇ ಮಂತ್ರಿ ರಾಮಶಾಸ್ತ್ರಿಯ ಸ್ವಂತ ಮಗನಿಗೆ ರಾಜಭಟರಿಂದ ಕೊರಡೇಯೇಟು ಕೊಡಿಸಿದನು.

ನೀಲಿ ಹೂವನ್ನು ತೋರಿಸಿದ ಗಿರಿನಾಥನಿಗೆ ಚಿನ್ನದ ನಾಣ್ಯಗಳ ಚೀಲವನ್ನು ಕೊಟ್ಟನು. ಓದು ಬರೆಹ ಕಲಿಯದ ಗಿರಿನಾಥನು ಜಮೀನುದಾರನ ಹತ್ತಿರ ಅಸಭ್ಯ ರೀತಿಯಲ್ಲಿ ನಡೆದುಕೊಂಡಿದ್ದನಂತೆ.





# ಮೋಸಕ್ಕೆ ಮೋಸ

ಒಂದು ಊರಿನಲ್ಲಿ ಶರಭಯ್ಯನೆಂಬ ಒಬ್ಬ ಧನಿಕನಿದ್ದ. ಅವನಿಗೆ ಎಷ್ಟು ಧನವನ್ನು ಸಂಪಾದಿಸಿ ಕೂಡಹಾಕಿದರೂ ತೃಪ್ತಿಯಿಲ್ಲ. ಇನ್ನಿಷ್ಟು ಧನವನ್ನು ಸುಲಭವಾಗಿ ಸಂಪಾದಿಸುವುದು ಹೇಗೆಂದು ಯಾವಾಗಲೂ ಆಲೋಚನೆ ಮಾಡುತ್ತಲೇ ಇದ್ದ. ಕಟ್ಟಕಡೆಗೆ ಅವನಿಗೊಂದು ಒಳ್ಳೆಯ ಸುಲಭ ಉಪಾಯ ತೋರಿತು.

ಆ ಉಪಾಯದಂತೆ ಶರಭಯ್ಯ ಬೀದಿ ಬೀದಿ ತಿರುಗುತ್ತಾ ಭಿಕ್ಷೆಬೇಡುವ ಹುಡುಗನೊಬ್ಬನನ್ನು ಕರೆದುಕೊಂಡು ಬಂದು, ತನ್ನ ಉಪಾಯವನ್ನು ಅವನಿಗೆ ಹೇಳಿ, "ನಾನು ಹೇಳಿದ ಹಾಗೆ ಮಾಡಿದರೆ ನೀನು ತಂದುದರಲ್ಲಿ ಅರ್ಧ ನಿನಗೆ ಕೊಡುತ್ತೇನೆ. ನನ್ನ ಹತ್ತಿರ ಎರಡುದಿನ ನೀನಿದ್ದರೆ ಸಾಕು" ಎಂದ. ತಿಂಡಿಗಾಗಿ ಬಾಯಿ ತೆರೆದುಕೊಂಡಿದ್ದ ಆ ಹುಡುಗ ಶರಭಯ್ಯನ ಕೋರಿಕೆಯಂತೆ ನಡೆಯಲು ಉತ್ಸಾಹದಿಂದಲೇ ಒಪ್ಪಿದ.

ಆ ದಿನ ಹಗಲಿಡೀ ಯಾವ ವಿಶೇಷವೂ ನಡೆಯಲಿಲ್ಲ. ಸುಮಾರು ಮಧ್ಯರಾತ್ರಿಯ ಹೊತ್ತಿನಲ್ಲಿ ಶರಭಯ್ಯ ಅಕಸ್ಮಾತ್ತಾಗಿ "ಕಳ್ಳರು! ಕಳ್ಳರು! ಅಯ್ಯಯ್ಯೋ! ರಕ್ಷಿಸಿ ರಕ್ಷಿಸಿ!" ಎಂದು ಗಟ್ಟಿಯಾಗಿ ಕೂಗಿಕೊಳ್ಳತೊಡಗಿದ.

ಶರಭಯ್ಯನ ಕೆಟ್ಟ ಕೂಗು ಸುತ್ತುಮುತ್ತಲಿದ್ದ ಮನೆಯವರಿಗೆಲ್ಲಾ ಕೇಳಿಸಿತು. ಎಲ್ಲರೂ ಕೈಗೆ ಸಿಕ್ಕಿದ ಕತ್ತಿ, ಕೊಡಲಿ, ದೊಣ್ಣೆ, ಕೋಲು ಕಟ್ಟಿಗೆಗಳನ್ನು ಹಿಡಿದುಕೊಂಡು ಓಡಿಬಂದರು.

ಅಷ್ಟರೊಳಗೆ ಶರಭಯ್ಯ ಮನೆಯ ಹಿಂದಿನ ಬಾಗಿಲನ್ನು ತೆರೆದಿಟ್ಟು, ಕಳ್ಳರು ಈ ದಾರಿಯಿಂದ ಓಡಿ ಹೋದರೆಂದು ಹೇಳಿದ. ತನ್ನ ಕೂಗು ಕೇಳಿ ಅವರು ಓಡಿ ಹೋದರಂತೆ. ಬಂದವರೆಲ್ಲ ಬಹಳ ಹೊತ್ತಿನವರೆಗೆ ಕಳ್ಳರನ್ನು ಹುಡುಕಿ ಯಾರೂ ಸಿಕ್ಕದೆ, ಶರಭಯ್ಯನಿಗೆ ಧೈರ್ಯದ ಮಾತುಗಳನ್ನು ಹೇಳಿ, ತಮ್ಮ ತಮ್ಮ ಮನೆಗೆ ಹೊರಟುಹೋದರು.

ಇದೆಲ್ಲಾ ನಡೆಯುತ್ತಿದ್ದಾಗ ಶರಭಯ್ಯ ಏರ್ಪಡಿಸಿದ್ದ ಭಿಕ್ಷುಕ ಹುಡುಗ ನೆರೆಕರೆ ಮನೆಗಳಲ್ಲಿ ಹುಡುಕಿ ಅಲ್ಲಿ ಇಲ್ಲಿ ದೊರೆತಷ್ಟು ಪಾತ್ರಪರಡಿ ಸಾಮಾನುಗಳನ್ನು ಸಂಗ್ರಹಿಸಿ ಒಂದು ಗೋಣೀ ಚೀಲದೊಳಗೆ ಹಾಕಿ, ಹೊತ್ತುಕೊಂಡು ಶರಭಯ್ಯನ ಮನೆಗೆ ಹಿಂದಿರುಗಿದನು.

ಎ. ಆರ್. ಪಾಟೀಲ್

ಶರಭಯ್ಯ ಬಹಳ ಗಾಟ್ಟಾಗಿ ಅವನನ್ನು ಬರಮಾಡಿ ಮನೆಯ ಬಾಗಿಲುಗಳನ್ನೆಲ್ಲ ಮುಚ್ಚಿ ಗೋಣೀಚೀಲದೊಳಗಿದ್ದ ಪಾತ್ರ ಸಾಮಾನುಗಳನ್ನು ನೋಡಿ, ಹುಡುಗನನ್ನು ಹೊಗಳಿ, "ನೀನು ಇವು ಗಳನ್ನು ಎತ್ತಿಕೊಂಡು ಬರುವುದನ್ನು ಯಾರೂ ನೋಡಲಿಲ್ಲವಷ್ಟೆ ?" ಎಂದು ಕೇಳಿದ.

ತನ್ನಂಥವನನ್ನು ಶರಭಯ್ಯನಂಥ ಧನಿಕ ಮೆಚ್ಚಿ ಕೊಳ್ಳುವುದನ್ನು ನೋಡಿ ಆ ಹುಡುಗ ಸಂತೋಷ ದಿಂದ ಉಬ್ಬಿ, "ನಿಮ್ಮ ಬೊಬ್ಬೆ ಕೇಳಿ ಎಲ್ಲರೂ ನಿಮ್ಮ ಹತ್ತಿರವೇ ಬಂದರಲ್ಲಾ ? ಎಲ್ಲರ ಮನೆ ಬಾಗಿಲೂ ತೆರೆದಿತ್ತು. ಸಿಕ್ಕಿದ್ದು ಯಾವುದೂ ಬಿಡಲಿಲ್ಲ. ಆಯಿತಲ್ಲ ನನ್ನ ಕೆಲಸ ? ತಂದಿದ್ದೇನೆ. ನನ್ನಭಾಗ ಕೊಟ್ಟುಬಿಡಿ" ಎಂದ.

"ನಿನ್ನ ಭಾಗದ ಪಾತ್ರಗಳನ್ನು ಕೊಟ್ಟರೆ ಅವು ಗಳನ್ನು ನೀನು ಎಲ್ಲಿ ಅಡಗಿಸಿಡುತ್ತೀ ? ಎರಡು ದಿನ ಹೋಗಲಿ. ನಿನ್ನ ಭಾಗ ಕೊಡುತ್ತೇನೆ" ಎಂದು ಶರ ಭಯ್ಯ ಆ ಹುಡುಗನನ್ನು ಮಂಗಾಡಿಸಿ ಒಪ್ಪಿಸಿ, ಸದ್ಯ ಅವನ ತಿಂಡಿ ಖರ್ಚಿಗೆ ಎರಡು ರೂಪಾಯಿ ಕೊಟ್ಟು ಕಳಿಸಿಬಿಟ್ಟ. ಆಮೇಲೆ ಕದ್ದ ವಸ್ತುಗಳನ್ನೆಲ್ಲ ನೆಲಮಾಳಿಗೆಯಲ್ಲಿ ಅಡಗಿಸಿಟ್ಟು ಮಲಗಿ ನಿದ್ದೆಮಾಡಿ ರಾತ್ರಿಯನ್ನು ಕಳೆದ.

ಮಾರನೇದಿನ ಕೂಡಾ ಅರ್ಧರಾತ್ರಿಯ ಹೊತ್ತಿಗೆ ಶರಭಯ್ಯ, "ಅಯ್ಯಯ್ಯೋ ! ಕಳ್ಳರು ! ಕಳ್ಳರು !" ಎಂದು ಕೂಗಿದ. ಶರಭಯ್ಯನ ತಂತ್ರವನ್ನು ಅರಿಯದ ನೆರೆಹೊರೆಯವರು ಅವಸರದಿಂದ ಶರಭಯ್ಯನ ಮನೆಗೆ ಓಡಿಬಂದರು.

ಅವರು ಬಂದುದನ್ನು ಗಮನಿಸಿ ಶರಭಯ್ಯ ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡು "ಕಳ್ಳರು! ಕಳ್ಳರೂ!..." ಎಂದು ಕೂಗುತ್ತಾ ನಡುಗ ತೊಡಗಿದ.

ಮಲಗಿದಲ್ಲೇ ಕಣ್ಣು ಮುಚ್ಚಿ ಕೂಗಿ ನಡುಗುವ ಶರಭಯ್ಯನನ್ನು ಯಾರೋ ತಟ್ಟಿ ಎಬ್ಬಿಸಿದರು.



ಕೂಡಲೇ ಶರಭಯ್ಯ ಮೆಟ್ಟಿಬಿದ್ದವನಂತೆ ಎದ್ದು ತನ್ನನ್ನು ಎಬ್ಬಿಸಿದವನನ್ನು ಗಟ್ಟಿಯಾಗಿ ಹಿಡಿದು ಕೊಂಡು "ಕಳ್ಳ! ಕಳ್ಳ!" ಎಂದು ಕೂಗಿದ ಒಂದೇ ಸಮನೆ ನಡುಗತ್ತ.

"ಪಾಪ! ಶರಭಯ್ಯ ನಿನ್ನಿನ ಘಟನೆಯಿಂದ ಹೆದರಿ ಏನೋ ಕನಸುಕಂಡಿದ್ದಾನೆ." ಎಂದುಕೊಂಡು ಬಂದವರೆಲ್ಲಾ ಸಹಾನುಭೂತಿಯ ಮಾತುಗಳಿಂದ ಧೈರ್ಯ ಹೇಳಿದರು. "ನಿನ್ನೆ ರಾತ್ರಿ ನಮ್ಮ ಮನೆ ಗಳಲ್ಲಿ ಕೂಡಾ ಕಳ್ಳತನಗಳಾಗಿವೆ. ನಾಳೆಯಿಂದ ರಾತ್ರಿ ಯಲ್ಲಿ ಊರಿನ ಸುತ್ತಲೂ ದಿನಾ ಕಾವಲಿಡುವ ಏರ್ಪಾಡು ಮಾಡುತ್ತೇವೆ. ಇನ್ನೇನೂ ಭಯ ವಿಲ್ಲ" ಎಂದು ಹೇಳಿ ಬಂದವರೆಲ್ಲಾ ತಮ್ಮಪಾಡಿಗೆ ಹೊರಟುಹೋದರು.

ಅವರು ಹೋದ ಮೇಲೆ ಭಿಕ್ಷುಕ ಹುಡುಗನು ಬಂದು, "ನೀವು ಹೇಳಿದಂತೆ ಎರಡುದಿನ ಕೆಲಸ ಮಾಡಿದೆ. ಇವತ್ತು ನನಗೆ ಬರಬೇಕಾದ ಭಾಗವನ್ನು

"ಕೊಟ್ಟುಬಿಡಿ." ಎಂದ. "ನಿನಗೂ ಒಳ್ಳೆಯ ರೀತಿಯಲ್ಲಿ ಕೊಡಬೇಕಷ್ಟೆ? ನಾಳೆ ನಗರಕ್ಕೆ ಹೋಗಿ ಎಲ್ಲವನ್ನೂ ಮಾರಿ ಆ ಹಣದಲ್ಲಿ ನಿನ್ನ ಭಾಗವನ್ನು ಕೊಟ್ಟುಬಿಡುತ್ತೇನೆ." ಎಂದು ಹೇಳಿ ಶರಭಯ್ಯ ಹುಡುಗನನ್ನು ಒಪ್ಪಿಸಿ ಕಳುಹಿಸಿದನು.

ಹೇಳಿದಂತೆ ಶರಭಯ್ಯ ಮರುದಿನ ನಗರಕ್ಕೆ ಹೋಗಿ ಕಳವಿನ ಸಾಮಾನುಗಳನ್ನೆಲ್ಲಾ ಲಾಭವಾಗುವ ರೀತಿಯಲ್ಲಿ ಮಾರಿ, ಹಣಮಾಡಿಕೊಂಡು ಮನೆಗೆ ಹಿಂದಿರುಗಿದನು. ಆ ಭಿಕ್ಷುಕ ಹುಡುಗ ನಡುದಾರಿಯಲ್ಲಿ ಅವನೊಂದಿಗೆ ಕೂಡಿ, ಮನೆಯವರೆಗೂ ಅವನೊಂದಿಗೇ ಬಂದು, ತನ್ನ ಪಾಲಿನ ಹಣ ತನಗೆ ಕೊಡುವಂತೆ ಕೇಳಿದನು.

ಆಗ ಶರಭಯ್ಯ ಅವನನ್ನು ವಿಚಿತ್ರವಾಗಿ ನೋಡಿ, "ಯಾರೋ ನೀನು ಪೋರಾ! ನಡೆಯಾಚೆ! ಬೇಕಾದರೆ ನಿನ್ನ ಇಷ್ಟ ಬಂದ ಕಡೆಗೆ ಹೋಗಿ ಫಿರ್ಯಾದಿ ಮಾಡಿಕೋ! ಹೋಗು!" ಎಂದು ಬೈದು ಹೊರಗೆ ದೂಡಿಬಿಟ್ಟನು.

ಮರ್ಯಾದೆಯ ವಿಷಯ ತಿಳಿಯದ ಆ ಭಿಕ್ಷುಕ ಹುಡುಗ ಶರಭಯ್ಯ ಏನು ಕೊಟ್ಟರೂ ತೆಗೆದುಕೊಂಡರಾಯಿತೆಂಬ ಉದ್ದೇಶದಿಂದ ಮತ್ತೆ ತಿರುಗಿ ಬಂದು ಹೊಂಚಿನೋಡಿದ. ಆಗ ಶರಭಯ್ಯ ನಗರದಿಂದ ತಂದ ಹಣವನ್ನು ಎಣಿಸಿ ಮುಗಿಸಿ, ಪೂಜಾಗೃಹದ ವಿಗ್ರಹದ ಕೆಳಗಿನ ಅರೆಯೊಳಗೆ ಇಟ್ಟುದನ್ನು ನೋಡಿದ. ಅದನ್ನೇ ಹೇಗಾದರೂ ಕದ್ದುಬಿಟ್ಟರಾಯಿತೆಂದು ಹುಡುಗನಿಗೆ ತೋರಿತು.

ಅವನು ಆ ದಿನ ರಾತ್ರಿ ಕದಿಯುವುದು ಹೇಗೆಂದು ಆಲೋಚಿಸುತ್ತಾ, ಶರಭಯ್ಯನ ಮನೆಯ ಹತ್ತಿರ ಮರದ ಬುಡದಲ್ಲಿ ಒರಗಿಕೊಂಡಿದ್ದಾಗ, ಸಮೀಪಕ್ಕೆ ಯಾರೋ ಬಂದು ಗುಸು ಗುಸು ಮಾತಾಡಿಕೊಳ್ಳುವುದನ್ನು ನೋಡಿ, ಅವರು ಕಳ್ಳರೆಂದು ತಿಳಿದನು. ಕೂಡಲೇ ಅವನು ಅವರ ಬಳಿಗೆ ಹೋಗಿ, ಶರಭಯ್ಯ ತನಗೆ ಮಾಡಿದ ಮೋಸವನ್ನು ಅವರಿಗೆ ಹೇಳಿ, ಹಣವಿರುವ ಸ್ಥಳವನ್ನೂ ತಿಳಿಸಿದನು. ಆಮೇಲೆ ಅವರು ಕದ್ದುದರಲ್ಲಿ ತನಗೆ ಸ್ವಲ್ಪವಾದರೂ ಕೊಟ್ಟರೆ ಸಾಕೆಂದೂ ಹೇಳಿದನು.

ಕಳ್ಳರು ಅದಕ್ಕೆ ಒಪ್ಪಿಕೊಂಡು ಶರಭಯ್ಯನ ಮನೆಯೊಳಗೆ ಹೊಕ್ಕು, ಅವನನ್ನು ಕಟ್ಟಿಹಾಕಿಬಿಟ್ಟರು. ಶರಭಯ್ಯ ಕಳ್ಳರು ಕಳ್ಳರೆಂದು ಅರಚಿದರೂ ಅವನೇನೋ ಕನಸು ಕಂಡು ಕೂಗುವನೆಂದುಕೊಂಡು ಯಾರೂ ಅಲ್ಲಿಗೆ ಬರಲಿಲ್ಲ. ಕಳ್ಳರು ನಿರಾತಂಕವಾಗಿ ಶರಭಯ್ಯನ ಮನೆಯಲ್ಲಿದ್ದ ಯಾವತ್ತೂ ಧನವನ್ನೂ ದೋಚಿಕೊಂಡು, ಸ್ವಲ್ಪ ಹಣ ಭಿಕ್ಷುಕ ಹುಡುಗನಿಗೂ ಕೊಟ್ಟು, ತಮ್ಮ ದಾರಿ ಹಿಡಿದು ಹೋಗಿಬಿಟ್ಟರು.



# ಬೀಳದ ಸಿಡಿಲು

ರತ್ನಗಿರಿಯನ್ನು ರತ್ನಪಾಲನೆಂಬ ರಾಜನು ಆಳುತಿದ್ದನು. ಅವನು ತುಂಬ ರಸಿಕ ಹಾಗೂ ಆಗಾಗ ಏನಾದರೂ ವಿಲಾಸ ಕೂಟಗಳನ್ನು ನಡೆಸಿಕೊಂಡಿರುವವನು.

ರತ್ನಪಾಲನು ಒಮ್ಮೆ ವನಭೋಜನದ ಏರ್ಪಾಡು ಮಾಡಿದ್ದನು.

ಒಳ್ಳೆಯ ಕಾಲಕ್ಷೇಪಕ್ಕಾಗಿ ರತ್ನಪಾಲನು ವನಭೋಜನದಲ್ಲಿ ವಿದೂಷಕನನ್ನು ತನ್ನ ಪಕ್ಕದಲ್ಲೇ ಭೋಜನಕ್ಕೆ ಕೂಡಿಸಿಕೊಂಡನು.

ಸಾಲು ಸಾಲಾಗಿರುವ ಆ ಪಂಕ್ತಿಯಲ್ಲಿ ಅನೇಕ ಜನರು ವಿಧವಿಧವಾದ ಭಕ್ಷ್ಯಗಳನ್ನು ಬಡಿಸಿಕೊಂಡು ಹೋಗುತ್ತಿದ್ದರು. ಎಲ್ಲರ ಎಲೆಗೂ ಲಡ್ಡು ಬಡಿಸಿದರು. ಏನೋ ಬಡಿಸುವವರ ಅವಸರದಲ್ಲಿ ವಿದೂಷಕನ ಎಲೆಗೆ ಮಾತ್ರ ಲಡ್ಡು ಬಿದ್ದಿರಲಿಲ್ಲ.

ವಿದೂಷಕನು ರತ್ನಪಾಲನ ಕಡೆಗೆ ತಿರುಗಿ, "ಈಗ ಅಕಸ್ಮಾತ್ತಾಗಿ ಮೋಡ ಕವಿದು ಎಲ್ಲರ ಮೇಲೂ ಸಿಡಿಲು ಬಿದ್ದರೆ?" ಎಂದ.

"ನಮ್ಮೆಲ್ಲರ ಮೇಲೆ ಬಿದ್ದ ಸಿಡಿಲು ನಿನ್ನ ಮೇಲೆ ಮಾತ್ರ ಬೀಳುವುದಿಲ್ಲವೆ?" ಎಂದ ರತ್ನಪಾಲ.

"ಹೇಗೆ ಬಿದ್ದೀತು? ನಿಮ್ಮೆಲ್ಲರ ಎಲೆಗಳಿಗೂ ಬಿದ್ದ ಲಡ್ಡು ನನ್ನ ಎಲೆಗೆ ಬಿತ್ತೇನು?" ಎಂದ ವಿದೂಷಕ.

ರತ್ನಪಾಲನು ನಕ್ಕು, ಬಡಿಸುವವರನ್ನು ಕರೆದು ವಿದೂಷಕನ ಎಲೆಗೆ ಲಡ್ಡು ಹಾಕಿಸಿದನು.





# ಸಹಜಗುಣ

ಒಂದು ಊರಿನಲ್ಲಿ ಸಾರಂಗನೆಂಬ ಯುವಕನಿದ್ದ. ಅವನು ಸಕಲ ಶಾಸ್ತ್ರಗಳನ್ನು ಕಲಿತು ಮುಗಿಸಿದ್ದ. ವಿದ್ಯಾನಿಧಿಯಾದ ಅವನು ಜೀವನದ ದಾರಿಯನ್ನು ನಿರ್ಣಯಿಸಿಕೊಳ್ಳಲು, ತನ್ನ ದೇಶದ ರಾಜಧಾನಿಯಾದ ಮಣಿಪುರಕ್ಕೆ ಬಂದನು.

ಅಷ್ಟು ಕಷ್ಟ ಪಟ್ಟು ದೊಡ್ಡ ಆಶೆಯಿಂದ ಬಂದವನಿಗೆ ಅರಮನೆಯ ವಠಾರದ ಸಮೀಪಕ್ಕೆ ಹೋಗಲು ಕೂಡಾ ಸಾಧ್ಯವಿಲ್ಲದೆ ಹೋಯಿತು. ಕೋಟೆಯ ಹೊರಗಿನ ದ್ವಾರದೊಳಗೆ ಪ್ರವೇಶಿಸಲಿಕ್ಕೆ ಕೂಡಾ ಯಾರದೋ ಶಿಫಾರಸ್ಸುಗಳೂ, ಲಂಚಕೊಡುವ ಶಕ್ತಿಯೂ ಬೇಕಾಗಿತ್ತು. ಮೊದಲು ಬೇಕಾದುದು ಅವೆರಡೇ. ಅಷ್ಟೇ ಹೊರತು ವಿದ್ಯೆ ಸಂಸ್ಕಾರ, ಪಾಂಡಿತ್ಯಗಳೆಲ್ಲ ಮೊದಲು ಯಾವ ಉಪಯೋಗಕ್ಕೂ ಬರುವುವುಗಳಾಗಿರಲಿಲ್ಲ.

ಈ ಸಂಗತಿ ಸ್ಪಷ್ಟವಾಗಿ ತಿಳಿದು ಬಂದಾಗ ಸಾರಂಗನಿಗೆ ತುಂಬಾ ಆಗ್ರಹಾವೇಶ ಬಂದಿತು. ತನಗೂ ಉದ್ಯೋಗಕ್ಕೂ ಅಡ್ಡ ನಿಲ್ಲುವವರನ್ನು ತನ್ನೊಂದಿಗೆ ಹೋಲಿಸಿ ನೋಡಿದರೆ ಹುಲ್ಲುಕಡ್ಡಿಯ ಬೆಲೆಗೂ ಬಾರದವರೆಂದು ಅವನಿಗೆ ಗೊತ್ತಾಯಿತು. ಆದರೆ ಆ ಸಂಗತಿ ಯಾರಿಗೆ ಗೊತ್ತಾಗುತ್ತದೆ? ಯಾರೊಂದಿಗೆ ಹೇಳಿಕೊಳ್ಳುವುದು? ಅರ್ಹತೆ ಬೇರೆ, ಅಧಿಕಾರ ಬೇರೆ. ಅರ್ಹತೆ ಅಧಿಕಾರಕ್ಕೆ ಬಾಗಿ ನಡೆಯದೆ ಗತ್ಯಂತರವಿಲ್ಲ. ಪ್ರಪಂಚದಲ್ಲಿ ಇದು ಎಂತಹ ವಿಚಿತ್ರ! ವಕ್ರದಾರಿಯಿಂದಾದರೂ ಅರ್ಹತೆ ಸಂಪಾದಿಸಿದರೆ ರಾಜನೂ ಆಗಬಹುದು.

ಅವನು ತನ್ನ ಗುರುವಿನ ಬಳಿಗೆ ಹೋಗಿ, ತನಗಾದ ಅನುಭವಗಳನ್ನು ಹೇಳಿ, "ಗುರುದೇವಾ, ನಾನು ಒಳ್ಳೆಯ ದಾರಿಯಲ್ಲಿ ಬದುಕಲು ಸಾಧ್ಯವಿಲ್ಲವೆಂದು ತೋರುತ್ತದೆ. ಕೆಟ್ಟ ಮಾರ್ಗದಲ್ಲಿ ನಡೆಯಲು ಯಾರ ಅನುಮತಿಯೂ ಬೇಡವಷ್ಟೇ? ಕೆಟ್ಟದಾರಿಯೇ ಅಧಿಕಾರಕ್ಕೆ ಮುಟ್ಟಿ ಇತರರ ಮೇಲೆ ಪ್ರಭಾವ ಬೀರುತ್ತದೆ. ಅದುದರಿಂದ ನಾನು ಕೂಡಾ ದುಷ್ಟ ಮಾರ್ಗದಲ್ಲಿ, ಅಂದರೆ ಕಳ್ಳತನ, ಮೋಸ ಅಗತ್ಯಬಿದ್ದರೆ ಕೊಲೆ ಕೂಡಾ ಮಾಡಿ ಬದುಕಬೇಕೆಂದಿದ್ದೇನೆ" ಎಂದನು.

ಗುರು ತಲೆಯಾಡಿಸುತ್ತ "ನಿನ್ನಿಂದಾಗದಪ್ಪ. ನಿನ್ನಿಂದಾಗದೆನ್ನಲು ಇದನ್ನೆಲ್ಲಾ ನೀನು ನನ್ನ ಹತ್ತಿರ ಬಂದು ಹೇಳುವುದೇ ಆಧಾರ. ಅದಕ್ಕೆ ತಕ್ಕುದಾದ

ಜಿ. ರಾಮು

ಶಿಕ್ಷಣವಾವುದೂ ನಿನಗಾಗಿಲ್ಲ. ನೀನು ನನ್ನ ಹತ್ತಿರ ಕಲಿತ ವಿದ್ಯೆಯಿಂದ ನಿನಗೆ ಒಳ್ಳೆಯ ಗುಣಗಳುಂಟಾದುವೇ ಹೊರತು, ದುರ್ಮಾಗಕ್ಕೆ ಅನುಕೂಲವಾದ ಗುಣವಲ್ಲ. ಆದರೂ ಈಗ ನಿನ್ನ ಬುದ್ಧಿಗೆ ಹೀಗೆ ತೋರಿದೆ. ನಿನಗೆ ತೋರಿದ ಹಾಗೇ ಮಾಡು. ನೀನೇನೂ ತಿಳಿಯದವನಲ್ಲವಷ್ಟೇ? ನಿನಗೆ ತೃಪ್ತಿಯಾದರೆ ನನಗೂ ತೃಪ್ತಿ" ಎಂದನು.

ಮನುಷ್ಯನು ಒಳ್ಳೆಯತನದಲ್ಲಿ ನಡೆಯಲಿಕ್ಕೂ ಕೆಟ್ಟತನದಲ್ಲಿ ನಡೆಯಲಿಕ್ಕೂ ಪರಿಸ್ಥಿತಿಯೇ ಕಾರಣವಾಗಿರುವುದಲ್ಲದೆ, ಶಿಕ್ಷಣವಲ್ಲವೆಂದು ಸಾರಂಗನು ನಂಬಿದ್ದನು. ಸಹಜವಾದ ಮನುಷ್ಯತ್ವವೂ ಕಾರಣವಾಗದೆಂದು ಅವನಿಗೆ ತೋರಿತು. ಆದುದರಿಂದ ಅವನು ಕಳ್ಳನಾಗಿ ಜೀವಿಸಲಿಕ್ಕೆ ನಿಶ್ಚಯಿಸಿ ಮಣಿಪುರಕ್ಕೆ ಹಿಂದಿರುಗಿದನು.

ಒಂದು ದಿನ ರಾತ್ರಿ ಬಹಳ ಹೊತ್ತು ಹೋದ ಮೇಲೆ ಸಾರಂಗನು ಕಳ್ಳತನಕ್ಕಾಗಿ ಒಂದು ಮನೆಯ ಆವರಣದೊಳಗೆ ಪ್ರವೇಶ ಮಾಡಿದನು. ಆ ಭಾಗಕ್ಕೆ ಹೊಂದಿದ ಕೋಣೆಯೊಳಗೆ ದೀಪವು ಬೆಳಗುತ್ತಿದ್ದಿತು. ಒಳಗಿನವರು ನಿದ್ರಿಸಿರಲಿಲ್ಲ. ಮಾತು ಕೇಳಿಸುತ್ತದೆ. ಸಾರಂಗನು ಗೋಡೆಯ ಬದಿಗೆ ತಾಗಿ ನಿಂತುಕೊಂಡು ಕೋಣೆಯೊಳಗೆ ನಡೆಯುವ ಸಂಭಾಷಣೆಯನ್ನು ಕೇಳತೊಡಗಿದನು.

ಆ ಮನೆಯ ಯಜಮಾನ ತನ್ನ ಹೆಂಡತಿಯೊಂದಿಗೆ, "ಹೇಗೋ ಒಂದು ರೀತಿಯಲ್ಲಿ ಕೊಡಬೇಕಾದವರೆಲ್ಲಾ ಕೊಟ್ಟುಬಿಟ್ಟರು. ಹತ್ತು ಸಾವಿರ ವರಾಹಗಳು ಸೇರಿದುವು. ಇನ್ನೇನೂ ಭಯವಿಲ್ಲ. ಹುಡುಗಿಯ ಮದುವೆ ನಿರ್ವಿಘ್ನವಾಗಿ ಸಾಗುತ್ತದೆ. ನೀನೇನೂ ಹೆದರಬೇಡ" ಎಂದನು.

ಅವನು ತನ್ನ ಹೆಂಡತಿಗೆ ವರಾಹಗಳ ಚೀಲ ಕೊಡುವುದನ್ನೂ, ಅವಳು ಅದನ್ನು ಪೆಟ್ಟಿಗೆಯಲ್ಲಿಡುವುದನ್ನೂ ಸಾರಂಗನು ನೋಡಿದನು.

ಅಂತಹ ಹಣವನ್ನು ಕಳವು ಮಾಡುವುದು ಮಹಾಪಾತಕವೆಂದು ಅವನಿಗೆ ತೋರಿತು. ಹೇರಳವಾಗಿ ಹಣವನ್ನಿಟ್ಟುಕೊಂಡು ಏನು ಮಾಡಬೇಕೆಂದು



ತೋರದಿರುವ ದೊಡ್ಡ ಧನಿಕರ ಹಣವನ್ನೇ ಕದಿಯಬೇಕು. ಇಂತಹ ಅತ್ಯಗತ್ಯಕ್ಕಾಗಿ ಕಷ್ಟಪಟ್ಟು ಸೇರಿಸಿದ ಹಣವನ್ನು ಕದಿಯುವುದು ಮಹಾ ಪಾಪವೆಂದು ಸಾರಂಗನಿಗೆ ತೋರಿತು.

ಅವನು ಕಳ್ಳತನದ ಉದ್ದೇಶವನ್ನು ಬಿಟ್ಟು ದೂರ ಹೋದನು. ಅದೇ ಸಮಯದಲ್ಲಿ ಮತ್ತೊಬ್ಬ ಮನುಷ್ಯ ಗೋಡೆ ಹಾರಿ ಅದೇ ಮನೆಯ ವಠಾರದೊಳಗೆ ಧುಮುಕಿದುದನ್ನು ನೋಡಿದನು. ಹಾಗೆ ಧುಮುಕಿದವನು ಕಳ್ಳನಾಗಿರಬೇಕು. ಸಾರಂಗನು ಹೊರಟುಹೋಗುವ ಉದ್ದೇಶವನ್ನು ಬಿಟ್ಟುಕೊಟ್ಟು ಮರಗಳ ಮರೆಯಲ್ಲಿ ಅಡಗಿ ಆ ಕಳ್ಳನನ್ನು ಗಮನಿಸತೊಡಗಿದನು.

ಮನೆಯವರು ದೀಪವಾರಿಸಿ ನಿದ್ರೆಗೆ ಪ್ರಾರಂಭಿಸುವವರೆಗೂ ಕಳ್ಳ ಏನೂ ಮಾಡಲಿಲ್ಲ. ಆಮೇಲೆ ಅವನು ಗೋಡೆಯ ಬುಡದಲ್ಲಿ ಕನ್ನ ಕತ್ತರಿಯಿಂದ ಕೊರೆದು ಒಳಗೆ ಪ್ರವೇಶಿಸಿದನು. ಅವನು ಕೋಣೆಯೊಳಗಿನ ಪೆಟ್ಟಿಗೆಯನ್ನು ತೆರೆದು ವರಾಹಗಳ ಮೂಟೆಯನ್ನು ಎತ್ತಿಕೊಂಡು ಮತ್ತೆ ಕನ್ನದ ಮೂಲಕವಾಗಿ ಹೊರಗೆ ಬರಲಿರುವುದನ್ನು ಪರೀಕ್ಷಿಸಿದ ಸಾರಂಗನು ಕನ್ನದ ಹತ್ತಿರವೇ ಕಾದಿದ್ದನು. ಹೊರಗೆ ಬಂದ ಕೂಡಲೇ ಅವನು ಕಳ್ಳನನ್ನು ಹಿಡಿದು "ಕಳ್ಳ! ಕಳ್ಳ!" ಎಂದು ಗಟ್ಟಿಯಾಗಿ ಕೂಗಿದನು.

ಮನೆಯವರೆಲ್ಲ ಎದ್ದರು. ನೆರೆಕರೆಯವರೂ ಓಡಿ ಬಂದರು. ಎಲ್ಲರೂ ಕೂಡಿ ಕಳ್ಳನನ್ನು ಹಿಡಿದು ರಾಜಭಟರ ವಶಕ್ಕೆ ಒಪ್ಪಿಸಿದರು.

ಕಳ್ಳನ ವಿಚಾರಣೆ ನಡೆಯುವಾಗ ರಾಜನು ಸಾರಂಗನನ್ನು ಕರೆಯಿಸಿ ಸಾಕ್ಷಿ ಹೇಳಿಸಿದನು. ತಾನು ಇಂಥವನೆಂದೂ, ಇಂತಿಂಥಾ ಶಾಸ್ತ್ರಪಾಂಡಿತ್ಯದಿಂದಿದ್ದು ಉದ್ಯೋಗಾನ್ವೇಷಿಯಾಗಿರುವೆನೆಂದೂ, ಕಳ್ಳನು ಒಂದು ಮನೆಯನ್ನು ಪ್ರವೇಶಿಸುವುದನ್ನು ನೋಡಿ ಕಾದಿದ್ದು ಅವನನ್ನು ಹಿಡಿದೆನೆಂದೂ ಸತ್ಯವನ್ನೇ ರಾಜನೊಂದಿಗೆ ಹೇಳಿದನು.

ಅದನ್ನೆಲ್ಲಾ ಕೇಳಿದ ಮೇಲೆ ರಾಜನು ಸಾರಂಗನನ್ನು ಮೆಚ್ಚಿ, ತುಂಬಾ ಬಹುಮಾನ ಕೊಟ್ಟುದು ಮಾತ್ರವಲ್ಲದೆ, ಅವನ ಯೋಗ್ಯತೆಗೆ ತಕ್ಕಂತೆ ಆಸ್ಥಾನದಲ್ಲಿ ಒಳ್ಳೆಯ ಉದ್ಯೋಗವನ್ನೂಕೊಟ್ಟನು.

ತರುವಾಯ ಸಾರಂಗನು ಗುರುವಿನ ಬಳಿಗೆ ಹೋಗಿ, "ಗುರುದೇವಾ, ನೀವು ಹೇಳಿದ್ದು ನಿಜವೇ, ನನಗೆ ಕಳ್ಳತನವು ಸಾಧ್ಯವಾಗುವ ಮಾತಲ್ಲ. ಆದರೆ ನಾನು ಹೇಳಿದುದೂ ನಿಜವೇ. ನಾನು ದುರ್ಮಾರ್ಗದಿಂದ ತಪ್ಪಿದರೂ, ಇನ್ನೊಬ್ಬ ದುರ್ಮಾರ್ಗದವನಿಂದಲೇ, ನನಗೆ ತಕ್ಕುದಾದ ಜೀವನದ ದಾರಿ ಕೂಡಾ ಏರ್ಪಟ್ಟಿತು." ಎಂದನು. ಅದನ್ನು ಕೇಳಿ ಗುರು ಮುಗುಳುನಕ್ಕರು.



# ಮೋಸಗಾರನ ಬದಿಯಲ್ಲಿ

ಒಬ್ಬ ಮಹಾ ಪಂಡಿತನು ಕೃಷ್ಣದೇವರಾಯನ ಆಸ್ಥಾನಕ್ಕೆ ಹೋಗಿ, ತನ್ನ ಪಾಂಡಿತ್ಯವನ್ನು ಪ್ರದರ್ಶಿಸಿ, ಸಾವಿರ ವರಾಹಗಳನ್ನು ಬಹುಮಾನವಾಗಿ ಪಡೆದುಕೊಂಡನು.

ಅವನಿಗೆ ನಗರದಲ್ಲಿ ಪರಿಚಯದವರಾರೂ ಇಲ್ಲದಿದ್ದುದರಿಂದ, ಆ ರಾತ್ರಿಯಲ್ಲಿ ಒಂದು ಸತ್ರದಲ್ಲಿ ತಂಗಿದನು. ಅವನು ದೊಡ್ಡ ಪಂಡಿತನೆಂದೂ, ಅವನಿಗೆ ರಾಯರಿಂದ ಸಾವಿರ ವರಾಹ ಸಿಕ್ಕಿದೆಯೆಂದೂ ಸತ್ರದಲ್ಲಿದ್ದ ಎಲ್ಲರಿಗೂ ಹೇಗೋ ಗೊತ್ತಾಗಿತ್ತು.

ರಾತ್ರಿಯಲ್ಲಿ ಪಂಡಿತನು ಎಲ್ಲರ ಹಾಗೇ ಸತ್ರದ ಚಾವಡಿಯಲ್ಲಿ ತನ್ನ ಚಾಪೆ ಹಾಸಿಕೊಂಡನು. ಆಗ ಅವನ ಪಕ್ಕದಲ್ಲೇ ಇನ್ನೊಬ್ಬನು ಕೂಡಾ ತನ್ನ ಚಾಪೆ ಹಾಸಿಕೊಂಡು ಮಲಗಿದನು. ಅವನೊಬ್ಬ ಮೋಸಗಾರ. ಸಾವಿರ ವರಾಹಗಳನ್ನು ವಶಪಡಿಸಿಕೊಳ್ಳಲೆಂದೇ ಅಲ್ಲಿ ಸೇರಿದ್ದನು.

ನಡುರಾತ್ರಿಯಲ್ಲಿ ಎಲ್ಲರೂ ಗಾಢ ನಿದ್ರೆಯಲ್ಲಿರುವಾಗ ಆ ಮೋಸಗಾರನು ಪಂಡಿತನ ತಲೆಯಡಿಯಲ್ಲಿದ್ದ ಚೀಲವನ್ನು ಉಪಾಯದಿಂದ ತೆಗೆದು ನೋಡಿದನು. ಅದರಲ್ಲಿ ವರಾಹಗಳಿರಲಿಲ್ಲ. ಪಂಡಿತನ ಹಾಸಿಗೆಯನ್ನು ಸಾಧ್ಯವಾದಷ್ಟೂ ಹುಡುಕಿದರೂ ವರಾಹಗಳ ಜಾಡು ಕಂಡು ಬರಲಿಲ್ಲ.

ಅವನು ಅದನ್ನು ಎಲ್ಲಿ ಅಡಗಿಸಿರುವನೋ ಎಂಬ ಆಸಕ್ತಿಯಿಂದ ಮೋಸಗಾರನು ಬೆಳಗಿನವರೆಗೂ ಆಲೋಚಿಸುತ್ತ ಎಚ್ಚರದಲ್ಲೇ ಇದ್ದನು.

ಬೆಳಗಾದ ಮೇಲೆ ಪಂಡಿತನು ಎದ್ದು, ಆ ಮೋಸಗಾರನ ತಲೆದಿಂಬಿನ ಅಡಿಗೆ ಕೈಹಾಕಿ ತನ್ನ ವರಾಹಗಳ ಗಂಟನ್ನು ಎತ್ತಿಕೊಂಡು ಹೊರಟುಹೋದನು.





# ಧರ್ಮದೇವತೆ

ಒಂದುಸಾರಿ ಪಾರ್ವತೀದೇವಿಗೆ ಒಂದು ಕುತೂಹಲ ವೆದ್ದಿತು. ಭೂಲೋಕದಲ್ಲಿ ಧರ್ಮದೇವತೆ ನೀತಿ ವಂತರನ್ನೂ, ಪ್ರಾಮಾಣಿಕರನ್ನೂ ಹೇಗೆ ಕಾಪಾಡುವ ಳೆಂದು ನೋಡಬೇಕೆನಿಸಿತು. ಅವಳು ತನ್ನ ಕೋರಿಕೆ ಯನ್ನು ಶಿವನೊಂದಿಗೆ ಹೇಳಲು, ಶಿವನು ಅವಳ ಕೋರಿಕೆ ಈಡೇರಲು, ವಿಜಯಪುರ ರಾಜ್ಯಕ್ಕೆ ಹೋಗುವಂತೆ ಹೇಳಿದನು.

ಆ ರಾಜ್ಯವನ್ನು ಅಮರಸೇನನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನ ಆಸ್ಥಾನದಲ್ಲಿ ವಿವೇಕ ವರ್ಮನೆಂಬ ಉನ್ನತಾಧಿಕಾರಿಯೊಬ್ಬನಿದ್ದ. ಅವನು ದೊಡ್ಡ ನೀತಿವಂತನೂ ಪ್ರಾಮಾಣಿಕನೂ ಆಗಿದ್ದನು. ಅವನ ಅಧಿಕಾರದಲ್ಲಿ ಕೈಕೆಳಗಿನವರಿಗೆ ತಪ್ಪು ಕೆಲಸ ಗಳನ್ನು ಮಾಡಲಿಕ್ಕೆ ಸ್ವಲ್ಪವೂ ಅವಕಾಶವಿರಲಿಲ್ಲ.

ದುಷ್ಟರದೇ ಒಂದು ಗುಂಪೂ ಅಲ್ಲಿತ್ತು. ಸುರೇಂದ್ರ ವರ್ಮನೆಂಬವನು ಆ ಗುಂಪಿಗೆ ನಾಯಕನು. ಇವ ರೆಲ್ಲಾ ಕೂಡಿ ವಿವೇಕವರ್ಮನ ಉದ್ಯೋಗವು ಹೋಗುವಂತೆ ಒಂದು ಕುತಂತ್ರ ಮಾಡಿದರು. ಅವರು ತಾವು ಅನೀತಿಯಿಂದ ಸಂಪಾದಿಸಿದ ಧನದಿಂದ ಒಂದು ಸಾವಿರ ಬಂಗಾರದ ನಾಣ್ಯಗಳನ್ನು ಒಂದು ಪಾತ್ರದಲ್ಲಿ ಹಾಕಿ ಆ ಪಾತ್ರವನ್ನು ವಿವೇಕವರ್ಮನ ಮನೆಯಹಿಂದೆ ಗುಟ್ಟಾಗಿ ಹುಗಿದಿಟ್ಟರು.

ಆಮೇಲೆ ಅವರು ರಾಜನಿಗೆ ಒಂದು 'ಆಕಾಶ ರಾಮ'ನ ಕಾಗದ ಬರೆದರು. ಅದರಲ್ಲಿ ವಿವೇಕ ವರ್ಮನು ದೊಡ್ಡ ಲಂಚಕೋರನೆಂದೂ, ತಾನು ಅನೀತಿಯಿಂದ ಸಂಪಾದಿಸಿದ್ದನ್ನೆಲ್ಲಾ ಗುಟ್ಟಾಗಿ ತನ್ನ ಮನೆಯ ಹಿಂದೆ ಈಶಾನ್ಯ ಮೂಲೆಯಲ್ಲಿ ಹುಗಿ ದಿಟ್ಟಿರುವನೆಂದೂ ಬರೆದಿತ್ತು.

ಈ ಕಾಗದ ನೋಡಿದ ಕೂಡಲೇ ರಾಜನು ಕೆಲ ಮಂದಿ ಭಟರನ್ನು ಕರೆದುಕೊಂಡು ವಿವೇಕವರ್ಮನ ಮನೆಗೆ ಬಂದನು. ಅದನ್ನು ನೋಡಿ ವಿವೇಕವರ್ಮ ನಿಗೆ ಅತ್ಯಾಶ್ಚರ್ಯವಾಯಿತು. ರಾಜನು ಅವನಿಗೆ ಅನಾಮಧೇಯದ ಕಾಗದದ ಸಂಗತಿಯನ್ನು ಹೇಳಿ, ಭಟರಮೂಲಕ ಈಶಾನ್ಯ ದಿಕ್ಕಿನಲ್ಲಿ ನೆಲವನ್ನು ಅಗೆಯಿಸಿದನು. ಪಾತ್ರವೊಂದು ಹೊರಬಂದಿತು. ಅದರೊಳಗೆ ಬರಿಯ ಕಲ್ಲುಗಳೇ ತುಂಬಿದ್ದುವು.

ತನಗೆ ಆಗದವರಾರೋ ಈ ರೀತಿಯಾಗಿ ತಂತ್ರ ವನ್ನು ಮಾಡಿದ್ದಾರೆಂದು ವಿವೇಕವರ್ಮನು ರಾಜ ನೊಂದಿಗೆ ಸಮಾಧಾನ ಹೇಳಿದನು. ಆ ಪಾತ್ರದಲ್ಲಿದ್ದ

ಕೆ. ಕೃಷ್ಣ ಅಯ್ಯರ್

ಬಂಗಾರವು ಈ ವಿಧವಾಗಿ ಮಾಯವಾಗಿತ್ತು. ದುಷ್ಟರು ಕೆಲವರು ರಾತ್ರಿಯ ಹೊತ್ತಿನಲ್ಲಿ ಬಂಗಾರವನ್ನು ವಿವೇಕವರ್ಮನ 'ಮನೆಗೆ ಒಯ್ಯುವುದನ್ನು ಒಬ್ಬ ಕಳ್ಳನು ಹೊಂಚಿ ನೋಡಿದ್ದ. ಅವನೂ ಅವರ ಬೆಂಬತ್ತಿದ್ದ. ಅವರು ಆ ಧನವನ್ನು ಎಲ್ಲಿ ಅಡಗಿಸಿಟ್ಟರೆಂಬುದನ್ನು ಕಂಡುಹಿಡಿದು, ಅವರು ಹೋದಮೇಲೆ, ಆ ಪಾತ್ರವನ್ನು ಮೇಲೆ ತೆಗೆದು ಅದರಲ್ಲಿಯ ಬಂಗಾರವನ್ನು ಎತ್ತಿಕೊಂಡು ಕಲ್ಲುಗಳನ್ನು ತುಂಬಿಸಿ ಅಲ್ಲಿಯೇ ಹುಗಿದಿಟ್ಟು ಹೊರಟುಹೋಗಿದ್ದ.

ಈ ರೀತಿಯಾಗಿ ಧರ್ಮದೇವತೆ ವಿವೇಕವರ್ಮನನ್ನು ಹೇಗೆ ಕಾಪಾಡಿದಳೆಂಬುದನ್ನು ಪಾರ್ವತಿ ನೋಡಿದಳು.

ತನ್ನ ಉಪಾಯವು ಹೀಗೆ ಹಾಳಾದುದನ್ನು ನೋಡಿ ಸುರೇಂದ್ರವರ್ಮನೂ, ಅವನ ಅನುಚರರೂ ತುಂಬಾ ನಿರಾಶೆಯಿಂದ ಕೈಕೈ ಹಿಸುಕಿಕೊಂಡರು. ಅವರು ವಿವೇಕವರ್ಮನನ್ನು ಅಷ್ಟಕ್ಕೇ ಬಿಡದೆ ಇನ್ನೊಂದು ಪ್ರಯತ್ನಕ್ಕೆ ತಲೆಹಾಕಿದರು.

ಸುರೇಂದ್ರವರ್ಮನು ಒಂದುದಿನ ರಾತ್ರಿ ವಿವೇಕವರ್ಮನ ಮನೆಗೆ ತನ್ನ ಇಬ್ಬರು ಅನುಚರರನ್ನೂ, ಅವರೊಂದಿಗೆ ರತ್ನಾಭರಣಗಳಿಂದ ಭೂಷಿತಳಾದ ಒಬ್ಬಳು ಸ್ತ್ರೀಯನ್ನೂ ಕಳುಹಿಸಿದ್ದನು. ಅವರು ವಿವೇಕವರ್ಮನೊಂದಿಗೆ, "ಅಯ್ಯಾ, ನಾವು ಯಾತ್ರಿಕರು. ದೂರದೇಶದಿಂದ ಬರುತ್ತಿದ್ದೇವೆ. ಸತ್ರದಲ್ಲಿ ಇಳಿದುಕೊಂಡಿದ್ದೇವೆ. ನಮ್ಮ ಹತ್ತಿರ ಹೇರಳ ಧನವೂ, ರತ್ನಾಭರಣಗಳೂ ಇವೆ. ಇವುಗಳಿಗೆ ಸತ್ರದಲ್ಲಿ ಕಳ್ಳರ ಭಯವಿರುವುದರಿಂದ ಈ ರಾತ್ರಿಗೆ ನಮ್ಮ ಹಣ ಮತ್ತು ಆಭರಣಗಳನ್ನು ನಿಮ್ಮ ಮನೆಯಲ್ಲಿ ಭದ್ರವಾಗಿಟ್ಟುಕೊಂಡರೆ ತುಂಬ ಉಪಕಾರವಿತ್ತು. ನಾಳೆ ಬೆಳಿಗ್ಗೆ ಹೋಗುವಾಗ ಬಂದು ತೆಗೆದುಕೊಂಡು ಹೋಗುತ್ತೇವೆ" ಎಂದರು.

ಪರೋಪಕಾರ ಗುಣದವನಾದ ವಿವೇಕವರ್ಮನು ಅವರ ಕೋರಿಕೆಯಂತೆ ಹಣ ಮತ್ತು ಆಭರಣಗಳನ್ನು ತೆಗೆದು ಭದ್ರವಾಗಿ ಒಳಗೆ ಇಟ್ಟನು. ಆ ಕೂಡಲೇ ಕುತಂತ್ರಿಗಳಿಂದ ರಾಜನಿಗೆ ಒಂದು ಅನಾಮಧೇಯ



ಪತ್ರವು ಹೋಯಿತು. "ವಿವೇಕವರ್ಮನು ಲಂಚಕೋರನೆಂಬುದಕ್ಕೆ ಇನ್ನೊಂದು ಘಟನೆ ನಡೆದಿದೆ. ಅವನು ಒಂದು ವ್ಯಕ್ತಿಯ ಹತ್ತಿರ ದೊಡ್ಡ ಮೊತ್ತದಲ್ಲಿ ಹಣವನ್ನೂ ಆಭರಣಗಳನ್ನೂ ಲಂಚ ಪಡೆದಿದ್ದಾನೆ. ಅವನ ಮನೆ ಶೋಧಿಸಿದರೆ ಸಿಗುತ್ತವೆ."

ಇದನ್ನು ನೋಡಿ ರಾಜನು ಆ ರಾತ್ರಿಯಲ್ಲಿ ಭಟರೊಂದಿಗೆ ವಿವೇಕವರ್ಮನ ಮನೆಗೆ ಹೋಗಿ ಮನೆಯನ್ನೆಲ್ಲಾ ಶೋಧನೆ ಮಾಡಿಸಿದನು. ಆದರೆ ದೊಡ್ಡ ಮೊತ್ತದಲ್ಲಿ ಹಣವೋ ಆಭರಣಗಳೋ ಯಾವುದೂ ಸಿಗಲಿಲ್ಲ. ವಿವೇಕವರ್ಮನು ಎರಡನೇ ಸಾರಿ ಬಂದ ಆಕಾಶರಾಮ ಪತ್ರವನ್ನು ಕುರಿತು ರಾಜನೊಂದಿಗೆ ಹೀಗೆಂದನು:

"ಮಹಾಪ್ರಭುಗಳೇ ಈ ಸಾರಿ ಬಂದ ಕಾಗದದಲ್ಲಿ ಸ್ವಲ್ಪ ನಿಜವಿದೆ. ಕತ್ತಲೆಯಾದ ಮೇಲೆ ಇಬ್ಬರು ಪುರುಷರೂ, ಒಬ್ಬಳು ಸ್ತ್ರೀಯೂ ಇಲ್ಲಿಗೆ ಬಂದಿದ್ದರು. ತಾವು ಯಾತ್ರಿಕರೆಂದೂ ಸತ್ರದಲ್ಲಿ ತಂಗಿರುವೆವೆಂದೂ ಹೇಳಿದರು. ಅಲ್ಲಿ ಕಳ್ಳರ ಭಯವಿರುವುದರಿಂದ ತಮ್ಮ ಹಣ ಆಭರಣಗಳನ್ನೆಲ್ಲ ಭದ್ರವಾಗಿಡುವಂತೆ ಹೇಳಿ ನನಗೆ ಕೊಟ್ಟರು. ಆದರೆ ಸ್ವಲ್ಪ ಹೊತ್ತಿನ ಮೇಲೆ ಆ ಇಬ್ಬರಲ್ಲಿ ಒಬ್ಬನೂ ಆ ಸ್ತ್ರೀಯೂ ಬಂದು ತಾವು ಕೂಡಲೇ ಪ್ರಯಾಣ ಹೊರಡುವುದಾಗಿ ಹೇಳಿ ಹಣವನ್ನೂ ಆಭರಣಗಳನ್ನೂ ಕೇಳಿ ತೆಗೆದುಕೊಂಡು ಹೊರಟುಹೋದರು..."

ವಿವೇಕವರ್ಮನು ಹೀಗೆ ಹೇಳುತ್ತಿರುವಾಗಲೇ ರಾಜಭಟರು ಒಬ್ಬ ಪುರುಷನನ್ನೂ, ಸ್ತ್ರೀಯನ್ನೂ ಹಿಡಿದುಕೊಂಡು ಬಂದು, "ಮಹಾಪ್ರಭುಗಳೇ, ಇವರಿಬ್ಬರೂ ವಿಪರೀತ ಮೊತ್ತದ ಹಣವನ್ನೂ ಆಭರಣಗಳನ್ನೂ ಅಡಗಿಸಿಕೊಂಡು ಅನುಮಾನವಾಗುವ ರೀತಿಯಲ್ಲಿ ಓಡಿಹೋಗುತ್ತಿದ್ದಾಗ, ಹಿಡಿದು ಶೋಧನೆ ನಡೆಸಿದವು. ಇವರು ಸುರೇಂದ್ರವರ್ಮನ ಅನುಚರರು. ವಿವೇಕವರ್ಮನನ್ನು ಹೇಗಾದರೂ ಉದ್ಯೋಗದಿಂದ ಕೀಳಿಸಬೇಕೆಂದು ಪ್ರಯತ್ನಿಸಿದ್ದಾರಂತೆ. ಮಹಾರಾಜರ ಕೋಪಕ್ಕೆ ವಿವೇಕವರ್ಮರನ್ನು ಸಿಕ್ಕಿಸುವುದೇ ಅವರ ಉದ್ದೇಶವಂತೆ. ವಿವೇಕವರ್ಮರ ಬಳಿಯಲ್ಲಿ ಹಣವನ್ನು ಆಭರಣಗಳನ್ನು ಭದ್ರವಾಗಿಡಲು ಕೊಟ್ಟ ಮೇಲೆ, ಇವರಿಗೆ ಸುರೇಂದ್ರವರ್ಮನಿಗೆ ಮೋಸ ಮಾಡುವ ಬುದ್ಧಿ ಹುಟ್ಟಿ ಹೀಗೆ ಭದ್ರವಾಗಿರಿಸಿದ್ದನ್ನು ಅಪಹರಿಸಿ ಓಡಿಹೋಗುತ್ತಿದ್ದರಂತೆ. ಇದನ್ನೆಲ್ಲಾ ಇವರೇ ಒಪ್ಪಿದ್ದಾರೆ" ಎಂದನು.

ರಾಜನು ಸುರೇಂದ್ರವರ್ಮನನ್ನು ಕಠಿನವಾಗಿ ಶಿಕ್ಷಿಸಿದನು. ವಿವೇಕವರ್ಮನಿಗೆ ಇನ್ನೂ ಹೆಚ್ಚಿನ ಗೌರವದ ಪದವಿಯೂ ಸಿಕ್ಕಿತು. ಇದನ್ನೆಲ್ಲಾ ನೋಡಿದ ಪಾರ್ವತಿದೇವಿ ಧರ್ಮದೇವತೆಯನ್ನು ಮೆಚ್ಚಿಕೊಳ್ಳುತ್ತ, ಕೈಲಾಸಕ್ಕೆ ಹೊರಟುಹೋದಳು.






ಭಾರತ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದ ಭಾರತೀಯರಿಗೆ ಲೆಕ್ಕವಿಲ್ಲ. ಅಂತಹ ಮಹಾವೀರರ ಗುಂಪಿಗೆ ಸೇರ ತಕ್ಕವನು ಬಾಘಾಜತೀನ್. ಇವನು ೧೮೭೯ ರಲ್ಲಿ ಬಂಗಾಳದ ಒಂದು ಗ್ರಾಮದಲ್ಲಿ ಹುಟ್ಟಿದನು.



'ಬಾಘಾ' ಅಂದರೆ ಹುಲಿ. ಅವನಿಗೆ ಆ ಬಿರುದು ಹೇಗೆ ಬಂದಿತೆಂದರೆ, ಒಂದು ದಿನ ಬೆಳಗ್ಗೆ ಅವನ ಗ್ರಾಮದ ಸಮೀಪದಲ್ಲಿ ಹೆಬ್ಬುಲಿಯೊಂದು ಅವನ ಮೇಲೆ ಹಾರಿತು. ಅದನ್ನು ಅವನು ಒಂದು ಚೂರಿಯಿಂದಲೇ ಕೊಂದನು. ಹುಲಿ ಅವನನ್ನು ತೀವ್ರವಾಗಿ ಗಾಯಪಡಿಸಿತಾದರೂ ಡಾಕ್ಟರು ಹೇಳುವಂತೆ ಅವನು "ಕೇವಲ ಆತ್ಮಬಲ" ದಿಂದಲೇ ಬದುಕಿ ಉಳಿದನು.



ಜತೀನನ ಕೆಲಸ ಹುಲಿಯನ್ನು ಕೊಲ್ಲುವುದರಲ್ಲಿ ಮುಗಿಯಲಿಲ್ಲ. ಅವನು ಸಿಂಹದೊಂದಿಗೆ ಅಂದರೆ, ತನ್ನ ಮಾತೃದೇಶವನ್ನು ಆಕ್ರಮಿಸಿದ ಬ್ರಿಟಿಷರೊಂದಿಗೆ ಹೋರಾಡ ಬೇಕಾಗಿತ್ತು. ಸ್ವಾಮಿ ವಿವೇಕಾನಂದರೂ, ಶ್ರೀ ಅರವಿಂದರೂ ಹೇಳಿದ ರಾಷ್ಟ್ರೀಯ ಭಾವನೆಗಳಿಂದ ಉತ್ತೇಜಿತನಾಗಿ, ಅವನು ವಿದೇಶೀ ಪಾಲಕರ ಮೇಲೆ ಬಂಡಾಯವೇಳಲು, ಯುವಕರನ್ನು ರಹಸ್ಯವಾಗಿ ಒಂದುಗೂಡಿಸಿದನು.



ಅವನು ಆ ಯುವಕರಿಗೆ ತಾಲೀಮು, ವ್ಯಾಯಾಮ, ತುಪಾಕಿ ಸುಡುವುದು ಮೊದಲಾದುವನ್ನು ಕಲಿಸಿದನು. ಅವರೆಲ್ಲ ತಮ್ಮ ಜೀವನ ಕಾಲವನ್ನು ಭಾರತದ ಸ್ವಾತಂತ್ರ್ಯಕ್ಕಾಗಿ ಅಂಕಿತ ಗೊಳಿಸಿದರು. ಅವರ ಗೂಢಚರ್ಯೆಗಳನ್ನು ತಿಳಿದು ಬ್ರಿಟಿಷ್ ಸರಕಾರವು ಯುವಕರ ನಾಯಕನಾದ ಜತೀನನನ್ನು ಕೈದು ಮಾಡಿತು.



ಜತೀನನನ್ನು ಬೆದರಿಸಿದರು. ಚಿತ್ರಹಿಂಸೆಗಳಿಗೆ ಗುರಿ ಮಾಡಿದರು. ಆದರೆ ಅವನು ಯಾವ ರಹಸ್ಯವನ್ನೂ ಹೊರಗೆಡವಲಿಲ್ಲ. ಭಯಂಕರ ಕೆಲಸ ನಡೆಯುವುದಕ್ಕೆ ಮೊದಲೇ ಅವನನ್ನು ದಾರಿಗೆ ತರಬೇಕೆಂದು ಆಸ್ತಿ, ಹಣ, ಸುಖಗಳ ಆಶೆಯನ್ನು ತೋರಿಸಿದರು. "ಬಾಯಿ ಮುಚ್ಚಿರಿ!" ಎಂದು ಜತೀನ್ ಮೇಜಿಯನ್ನು ಗಟ್ಟಿಯಾಗಿ ಗುದ್ದಲು, ಮೇಜು ಒಡೆಯಿತು.



ಯಾವ ಅಪರಾಧವನ್ನೂ ಹೇರಲಾಗದೆ ಜತೀನನನ್ನು ಬಿಡುಗಡೆ ಮಾಡಿಬಿಟ್ಟರು. ಇಷ್ಟರೊಳಗೆ ಅವನು ತನ್ನ ಅನುಚರರನ್ನು ಬಂಡಾಯಕ್ಕೆ ಬೇಕಾದ ಆಯುಧ ಸಾಮಗ್ರಿಗಳನ್ನು ತರಲು ಯುರೋಪಿಗೆ ಕಳುಹಿಸಿದನು. ಜರ್ಮನ್ ಸಹಾಯ ಮಾಡುವೆನೆಂದಿತು. ಜತೀನ್ ತನ್ನ ಮೂವರು ಅನುಚರರೊಂದಿಗೆ ಕಪ್ತಿಪಡಾ ಎಂಬ ಒಂದು ಕುಗ್ರಾಮಕ್ಕೆ ಹೋಗಿ ಬಾಲ್ಸೋರಿನ ಸಮೀಪವಿದ್ದ ಪುರಾತನ ರೇವಿನ ಹತ್ತಿರ ಆಯುಧಗಳ ಜರ್ಮನ್ ನೌಕೆ ಬರುವುದನ್ನು ಕಾಯುತ್ತಿದ್ದನು.

ಭಾರತ ಸ್ವಾತಂತ್ರ್ಯ ಸಮರಕ್ಕಾಗಿ ಆಯುಧ ಗಳನ್ನು ತರುವ ಜರ್ಮನ್ ನೌಕೆಯನ್ನು ಎರಡು ಬ್ರಿಟಿಷ್ ಹಡಗುಗಳು ಬೆಂಬತ್ತಿದುವು. ಸಿಕ್ಕಿ ಬೀಳುವುದರೊಳಗೆ ಜರ್ಮನ್ ನೌಕೆ ಆಯುಧ ಗಳನ್ನೆಲ್ಲ ಸಮುದ್ರಕ್ಕೆ ಬಿಸುಟಿತು. ಈ ಸಂಗತಿ ತಿಳಿದು ಜತೀನ್ "ಅಂದರೆ ನಾವು ವಿದೇಶದ ಸಹಾಯವನ್ನು ಪಡೆಯಬಾರದೆಂದಾಯಿತು" ಎಂದನು.





ಆಮೇಲೆ ಏನು ಮಾಡಬೇಕೆಂದು ಜತೀನ್ ನಿರ್ಣಯಿಸುವುದರೊಳಗೆ ಕಲಕತ್ತೆಯ ಗೂಢ ಚಾರರು ಅವನ ರಹಸ್ಯಸ್ಥಾವರವನ್ನು ಕಂಡು ಹಿಡಿದರು. ಪೋಲೀಸರು ಅವನನ್ನೂ ಅವನ ಅನುಚರರನ್ನೂ ಹಿಡಿಯಲು ಹೊರಟ ದಿನ ಮಳೆ ಸುರಿಯುತ್ತಿದ್ದಿತು. ಆದರೂ ಜತೀನ್ ಮತ್ತು ಅವನ ಕಡೆಯವರು ಅತ್ಯಂತ ಸಾಹಸ ದಿಂದ ತಪ್ಪಿಸಿಕೊಂಡರು.

ವಿಫಲರಾದ ಪೋಲೀಸರು, ದಾರಿದೋಚುವ ಕ್ರೂರ ಡಕಾಯಿತರು ತಪ್ಪಿಸಿಕೊಂಡು ಹೋಗು ತ್ತಿರುವರೆಂದು ಪ್ರಕಾರು ಹುಟ್ಟಿಸಿದರು. ಅವ ರನ್ನು ಹಿಡಿದುಕೊಟ್ಟವರಿಗೆ ಬಹುಮಾನ! ಆದರೆ ಅವನು ನಾಲ್ವರು ಅನುಚರರೊಂದಿಗೆ ಅಡಗುತ್ತ, ತೆವಳುತ್ತ ಮನುಷ್ಯರ ಕಣ್ಣಿಗೆ ಬೀಳದೆ ಬುಢಬಲಂಗ್ ನದಿಯನ್ನು ತಲಪಿದರು.





ಅಲ್ಲಿಯ ಗ್ರಾಮಸ್ಥರು ಅವರನ್ನು ನೋಡಿ ಡಕಾಯಿತರೆಂದುಕೊಂಡು ಕೂಗಾಡ ತೊಡಗಿದರು. ಆದರೂ ಆ ಯುವಕರು ತುಪಾಕಿಗಳನ್ನೂ ಮದ್ದುಗುಂಡು ಸಾಮಾನುಗಳನ್ನೂ ಎತ್ತಿ ಹಿಡಿದುಕೊಂಡು ನದಿಯನ್ನು ದಾಟಿದರು.



ಪೋಲೀಸರೂ ಸೈನಿಕರೂ ಅಲ್ಲಿಗೆ ಬರುವಾಗ ಒಂದು ಮಣ್ಣಿನ ದಿಣ್ಣೆಯ ಮೇಲೆ ಹುತ್ತಗಳ ಮರೆಯಲ್ಲಿ ಯುದ್ಧಕ್ಕೆ ಸಿದ್ಧರಾದರು. ಅನೇಕ ಗಂಟೆಗಳವರೆಗೆ ಹೋರಾಟ ನಡೆಯಿತು. ಆ ನಾಲ್ವರು ವೀರರ ತುಪಾಕಿಗಳಿಗೆ ಅನೇಕ ಡಜನ್ ಪೋಲೀಸರು ಆಹುತಿಯಾದರು. ಶರೀರದಲ್ಲಿ ತೀವ್ರರಕ್ತಪ್ರವಾಹ ನಡೆದರೂ ಅವರು ಅಸ್ತ್ರಸನ್ಯಾಸ ಮಾಡಲಿಲ್ಲ. ಕೊನೆಯ ಗುಂಡು ಮುಗಿಯುವವರೆಗೂ ಹೋರಾಡಿದರು.



ಅಂತೂ ಕೊನೆಗೆ ಜತೀನ್ ಸಿಕ್ಕಿಬಿದ್ದ. ಆದರೆ ಅದೇ ದಿನ ರಾತ್ರಿಯೇ ಅವನ ಮರಣವಾಯಿತು. ಅವನು ತನ್ನನ್ನು ಹಿಡಿದವರೊಂದಿಗೆ, "ನನ್ನ ಅನುಚರರನ್ನು ಶಿಕ್ಷಿಸಬಾರದು. ನಡೆದುದೆಲ್ಲದಕ್ಕೂ ನಾನೇ ಬಾಧ್ಯನು !" ಎಂದನು. "ಭಾರತೀಯರೊಳಗೆಲ್ಲಾ ಮಹಾವೀರನನ್ನು ನೋಡಿದೆ !" ಎಂದು ಪೋಲೀಸ್ ಕಮಿಷನರ್ ಸರ್ ಚಾರ್ಲ್ಸ್ ಟೆಗಾರ್ಟ್ ಜತೀನನನ್ನು ಹೊಗಳಿದರು.

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

ಕಿಚಿಯೋಮು ಎಂಬ ಜಪಾನಿನವನು ಒಂದು ದಿನ ತನ್ನ ಹೆಂಡತಿಯನ್ನು ಕರೆದು, "ಪಕ್ಕದ ಮನೆಗೆ ಹೋಗಿ ಆಣಿಯನ್ನು ಒಳಕ್ಕೆ ತಳ್ಳಲು ಸುತ್ತಿ ಕೇಳಿ ತೆಗೆದುಕೊಂಡು ಬಾ. ನಮ್ಮ ಮನೆಯ ಒಂದು ಆಣಿ ಇಷ್ಟುದ್ದ ಹೊರ ಬಂದಿದೆ. ಅದು ಬಹಳ ಅಪಾಯ!" ಎಂದ.

ಅವನ ಹೆಂಡತಿ ನೆರೆಮನೆಗೆ ಹೋಗಿ ಬರಿಗೈಯಲ್ಲಿ ತಿರುಗಿಬಂದು, "ಪಕ್ಕದ ಮನೆಗೆ ಹೋಗಿ ಆಣಿ ಒಳಕ್ಕೆ ತಳ್ಳಿ ಹೊಡೆಯಲಿಕ್ಕೆ ಸ್ವಲ್ಪ ಸುತ್ತಿ ಕೊಡುವಿರಾ ಎಂದು ಕೇಳಿದೆ. 'ಎಂಥಾ ಆಣಿ? ಬಿದಿರಿನದಾ? ಕಟ್ಟಿಗೇದಾ? ಅಲ್ಲ ಕಬ್ಬಿಣದ ಆಣಿಯಾ?' ಅಂತ ಕೇಳಿದರು. ಕಬ್ಬಿಣದ ಆಣಿಯೇ ಅಂದೆ. 'ಹಾಗಾದರೆ ನಮ್ಮ ಸುತ್ತಿ ಕೆಡುವುದಿಲ್ಲವೆ? ಕೊಡಲಾಗುವುದಿಲ್ಲ' ಎಂದರು" ಎಂದಳು.

ಕಿಚಿಯೋಮು ಮುಖ ಸಿಂಡರಿಸಿ, "ಅಬ್ಬಾ! ಪ್ರಪಂಚದಲ್ಲಿ ಎಂತೆಂಥಾ ಪಿಸುಣಾರಿಗಳಿದ್ದಾರೋ? ಸರಿ, ಮತ್ತೇನು ಮಾಡೋದು? ನಮ್ಮ ಸುತ್ತಿಯೇ ತೆಗೆದುಕೊಂಡು ಬಾ" ಎಂದ.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಮಾರ್ಚಿ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೭ ಮೇ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಜನವರಿಯ ಸ್ಪರ್ಧೆಯ ಫಲಿತಾಂಶ: **ಬ್ರಹ್ಮಾಸ್ತ್ರ!**

ಕಳುಹಿಸಿದವರು: ಶ್ರೀಮತಿ ಸುಧಾಹರಿದಾಸ್, "ಶಾಂತಿಸುಧಾಕುಟೀರ" ಕೊಳಲಗಿರಿ, ಉಡುಪಿ (ದ. ಕ.)

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೭೭ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



A. S. Anbukkarasu



A. S. Anbukkarasu

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮಾರ್ಚಿ ೧೫ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಜನವರಿಯ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಅಂಗಡಿಗೆ ಕೊಟ್ಟರೆ ಹಣ ಬರುತ್ತೆ**

ಎರಡನೇ ಫೋಟೋ: **ಅಮ್ಮನಿಗೆ ಕೊಟ್ಟರೆ ಹಣ ಉಳಿಯುತ್ತೆ**

ಕಳುಹಿಸಿದವರು: **ಬಿ. ಆರ್. ಅನ್ನಪೂರ್ಣ,**

W/o. ಬಿ. ಎಸ್. ಹರಿಯಣ್ಣಯ್ಯ, ಉದಯ ಬಸ್ ಏಜೆಂಟ್, ಕಳಸ, ಚಿಕ್ಕಮಗಳೂರು.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama




# ಮಾಯಾಸರೋವರ

## ೧೪

[ಜಲಪಾತದಲ್ಲಿ ಸಿಕ್ಕಿ ಬದುಕಿ ಉಳಿದ ಜಯಶೀಲನೂ ಸಿದ್ಧಸಾಧಕನೂ ಒಬ್ಬ ಕುಳ್ಳನನ್ನು ನರಭಕ್ಷಕ ವೃಕ್ಷದ ಹಿಡಿತದಿಂದ ಕಾಪಾಡಿದರು. ಆ ಸಮಯದಲ್ಲಿ ಅಲ್ಲಿಗೆ ಕುಳ್ಳರ ರಾಣಿ ಬಂದಳು. ಅವಳು ತಮ್ಮ ಶತ್ರುಗಳನ್ನು ಕುರಿತು ಹೇಳುತ್ತಿದ್ದಾಗ, ಬೆಟ್ಟದ ಮೇಲಿನಿಂದ ಕೋತಿಯಂತಹ ಬೃಹತ್ ಪ್ರಾಣಿಯೊಂದು ಅವರ ಕಡೆಗೆ ದೊಡ್ಡದೊಂದು ಬಂಡೆ ಕಲ್ಲನ್ನು ಎತ್ತಿ ಬಿಸುಟಿತು.]

ಅದೃಷ್ಟವಶಾತ್ತಾಗಿ ಆ ದೊಡ್ಡ ಬಂಡೆಗಲ್ಲು ಜಯಶೀಲ ಮೊದಲಾದವರು ನಿಂತಿದ್ದ ಸ್ಥಳಕ್ಕೆ ಇಪತ್ತು ಮೂವತ್ತು ಅಡಿ ದೂರಕ್ಕೆ ಬಿದ್ದುಬಿಟ್ಟಿತ್ತು. ಇದರಿಂದ ಆ ಪ್ರಾಣಿಗೆ ಗುರಿಯ ಸಾಧನೆ ಸರಿಯಾಗಿಲ್ಲವೆಂಬುದು ಸ್ಪಷ್ಟವಾಯಿತು. ಅದಕ್ಕೆ ಅಭ್ಯಾಸ ಮಾಡಿಸಿದ ಮನುಷ್ಯನಿಗೆ ಅವಸರದ ಬುದ್ಧಿಯಾಗಿರಬೇಕು.

ಜಯಶೀಲನೂ ಸಿದ್ಧಸಾಧಕನೂ ಬೆಟ್ಟದ ತಲೆಯಲ್ಲಿ ಇನ್ನೂ ನಿಂತಿರುವ ಆ ಭಯಂಕರ ಪ್ರಾಣಿಯನ್ನೂ, ಅದರ ಪಕ್ಕದಲ್ಲಿ ನಿಂತಿದ್ದ ಮನುಷ್ಯನನ್ನೂ ನೋಡುತ್ತ ಬಹಳ ಆಶ್ಚರ್ಯಪಡುತ್ತಿದ್ದರು. ಕಾರಣವೇನೆಂದರೆ ಆ ಮನುಷ್ಯನನ್ನು ಎಲ್ಲಿಯೋ ನೋಡಿರುವೆನೆಂಬ ನೆನಪು ಜಯಶೀಲನನ್ನು ಚುಚ್ಚಿಕೊಂಡೇ ಇದ್ದಿತು. ಅವನೊಬ್ಬ ತನ್ನ ಹಗೆಗಾರನಂತಿದ್ದಾನೆ. ಎಲ್ಲಿ, ಎಲ್ಲಿಯೆಂದು ತೀವ್ರವಾಗಿ ನೆನಪನ್ನು ಕೆದರಿಕೊಳ್ಳುತ್ತಿದ್ದರೂ ನೆನಪಿಗೆ ಬರಲೊಲ್ಲದು.

ಅಷ್ಟರಲ್ಲಿ ದಢಾಲ್ಲನೆ ಆ ಬಂಡೆಗಲ್ಲು ಬಿದ್ದು, ಎಲ್ಲರನ್ನೂ ಹಾರಿ ಬೀಳಿಸಿ ಕೂಗಿಡಿಸಿತು. ಕುಳ್ಳ ಜನರೆಲ್ಲಾ ತಮ್ಮ ಟಗರು ವಾಹನಗಳನ್ನು ದೂರಕ್ಕೆ ಓಡಿಸಿ ನಿಂತರು, ಕುಳ್ಳ ರಾಣಿ ಕೂಡಾ ತುಸು ದೂರಸಾಗಿ ನಿಂತು, ಜಯಶೀಲನನ್ನು ನೋಡಿ, "ಮಹಾ



259



ಕಾಯರೇ, ಆ ಭಯಂಕರವಾದ ಗುಡ್ಡದಷ್ಟು ದೊಡ್ಡ ನರವಾನರವನ್ನು ನೋಡಿದಿರಾ? ಅದನ್ನು ಪಳಗಿಸಿದ ಆ ಮಹಾಕಾಯನೂ ನಮ್ಮನ್ನು ನಾನಾ ಹಿಂಸೆಗಳಿಗೆ ಒಳಪಡಿಸುತ್ತಿದ್ದಾನೆ. ಈ ಕಷ್ಟವು ನಮಗೆ ಬಂದು ಹತ್ತು ಹನ್ನೆರಡು ದಿನಗಳಾದುವು. ಕಾಡಿನಲ್ಲಿ ಬೇಟೆಯಾಡಲು ಹೋಗಿದ್ದ ನಮ್ಮ ಜಾತಿಯ ನಾಲ್ಕು ಮಂದಿಯನ್ನು ಆ ಮಹಾಕಾಯನು ಕೊಂದುಹಾಕಿದ್ದಾನೆ ಕೂಡಾ. ಯಾವ ಕ್ಷಣದಲ್ಲಾದರೂ ನಮ್ಮ ಜಾತಿಗಳವರು ಈ ಕ್ರೂರನ ಸಹಾಯ ತೆಗೆದುಕೊಂಡು ನಮ್ಮ ಮೇಲೆ ದಾಳಿ ಮಾಡಬಹುದು. ರಾತ್ರಿಹಗಲೂ ಇದೇ ಚಿಂತೆಯಾಯಿತು ನಮಗೆ. ಅವನನ್ನು ಹೇಗೆ ತೊಲಗಿಸುವುದೆಂದೇ ಗೊತ್ತಾಗುವುದಿಲ್ಲ." ಎಂದಳು.

ಜಯಶೀಲನಿಗೂ ಸಿದ್ಧಸಾಧಕನಿಗೂ ಈ ಗಡೇಕಾರಿ ರಾಣಿಯ ಮೇಲೆ ಕನಿಕರವಾಯಿತು. ಅವರ ರೂಪಾಕಾರಗಳ ಮಟ್ಟಿಗೆ ಅವಳೂ ಅವಳ ಕಡೆಯವರೂ ಧೈರ್ಯ ಸಾಹಸಗಳುಳ್ಳವರೆಂದು ಗೊತ್ತಾಗುತ್ತಿದೆ. ಆದರೆ ಅವರ ಅಳವಿಗೆ ಮೀರಿದಂತಿರುವ ನರವಾನರವನ್ನೂ, ಅದರೊಂದಿಗಿರುವ ಮನುಷ್ಯನನ್ನೂ ನೋಡಿ ಭಯಭ್ರಾಂತರಾಗಿದ್ದಾರೆ. ಕುಳ್ಳಜನಾಂಗವಾದ ಅವರ ಶಕ್ತಿಗೆ ಅವೆರಡೂ ದೊಡ್ಡ ದೈತ್ಯ ಶಕ್ತಿಗಳೇ.

"ಜಯಶೀಲಾ, ಆ ನರವಾನರದ ಹತ್ತಿರ ಕತ್ತಿ ಹಿಡಿದುಕೊಂಡಿರುವವನು ನಮ್ಮ ರಾಜ್ಯದ ಮನುಷ್ಯನಾಗಿರಲಾರನಷ್ಟೆ? ಅವನ ನಡೆನುಡಿ ಹಾವ ಭಾವಗಳನ್ನು ನೋಡುವಾಗ ನನಗೇನೋ ಸಂದೇಹವಾಗಿದೆ. ಸ್ವಲ್ಪ ಪರೀಕ್ಷಿಸಿ ನೋಡು!" ಎಂದ ಸಿದ್ಧಸಾಧಕ.

ಇಷ್ಟರಲ್ಲಿ ಜಯಶೀಲನಿಗೆ ಕೂಡಾ ಆ ಮನುಷ್ಯ ಇಂಥವನೇ ಆಗಿರಬೇಕೆಂಬ ಅನುಮಾನ ಉಂಟಾಯಿತು. ಆದರೆ ಅವನು ತನ್ನ ಹಾಗೆ ಅರಣ್ಯಗಳನ್ನೂ, ಬೆಟ್ಟಗಳನ್ನೂ, ನದಿಗಳನ್ನೂ ದಾಟಿ ಈ ಸ್ಥಳಕ್ಕೆ ಬರುವುದು ಸಾಧ್ಯವೆಂದು ತೋರಲಿಲ್ಲ. ಬರುವ ಕಾರಣವಾದರೂ ಏನಿದ್ದೀತು ಅವನಿಗೆ? ಅವನಂತಿರುವ ಇನ್ನೊಬ್ಬನಿರಬೇಕು.

ಜಯಶೀಲನು ಹೀಗೆ ಆಲೋಚಿಸಿಕೊಂಡಿರುವಾಗ ನರವಾನರದ ಬದಿಯಲ್ಲಿದ್ದವನು, ವಾನರವನ್ನು ಕತ್ತಿಯ ತುದಿಯಿಂದ ತಿವಿತಿವಿದು ಏನೋ ಮಾಡುವಂತೆ ಒತ್ತಾಯಿಸುತ್ತಿದ್ದನು. ನರವಾನರವು ಹಾರುತ್ತ ಹೋಗಿ ಸಮೀಪದಲ್ಲಿದ್ದ ಬಂಡೆಗಲ್ಲನ್ನು ಮೇಲೆತ್ತಲು ಪ್ರಯತ್ನಿಸುತ್ತಿತ್ತು. ಆ ಕಲ್ಲು ಬಹಳ ದೊಡ್ಡದಾದುದರಿಂದ ಸುಲಭದಲ್ಲಿ ಎತ್ತಲು ಅದರಿಂದಾಗಲಿಲ್ಲ. ಎತ್ತುವಂತೆ ಅವನು ತಿವಿದು ಪೀಡಿಸುತ್ತಿದ್ದನು.

"ನೋಡಿದೆಯಾ ಸಾಧಕಾ? ಆ ಕ್ರೂರ ಮನುಷ್ಯ ಬಂಡೆಗಲ್ಲನ್ನು ನಮ್ಮ ಮೇಲೆ ಬಿಸುಡಿಸುವ ಕೆಲಸ ಮಾಡುತ್ತಾನೆ. ಈ ಹಚ್ಚಹಗಲಿನಲ್ಲಿ ಅಂತಹ ಏಟುಗಳನ್ನು ತಪ್ಪಿಸಿಕೊಳ್ಳುವುದು ಬಹಳ ಸುಲಭವೆಂಬ ಯೋಚನೆ ಕೂಡ ಆ ಮಡೆಯನಿಗೆ ಬಂದಂತಿಲ್ಲ" ಎಂದು ಹೇಳಿ ಜಯಶೀಲನು ಗಡೇಕಾರಿ ರಾಣಿಯ



...ಗೆ ತಿರುಗಿ, "ಏನಮ್ಮಾ ಕುಬ್ಜರಾಣೀ, ನಿನ್ನ ಕಡೆ ...ವರು ಕಾಡಿನಲ್ಲಿ ಬೇಟೆಯಾಡಲು ಬಿಲ್ಲುಬಾಣ ...ನ್ನು ಉಪಯೋಗಿಸುತ್ತಾರಷ್ಟೆ? ಅಂತಹ ಬಿಲ್ಲು ...ಣಗಳನ್ನು ಬೇಗನೇ ತರಿಸು. ಇವರ ಕಥೆ ತೀರಿಸು ...ನೆ" ಎಂದನು. ಅವರ ಬಿಲ್ಲುಬಾಣಗಳು ತೀರ ...ವಾಗಿದ್ದರೆ ಅದರಿಂದ ಪ್ರಯೋಜನವಿರಲಾರ ...ದೂ ಅವನಿಗೆ ತೋರಿತು.

...ಆ ಕುಳ್ಳ ಜಾತಿಯವರು ಸಾಧಾರಣವಾಗಿ ಭಲ್ಲೆ ...ಂದಲೇ ಬೇಟೆಯಾಡುತ್ತಾರೆ. ಬಿಲ್ಲುಬಾಣಗಳನ್ನು ...ಟ್ಟಕೊಡದೆಂಬುದು ಅವರ ಜಾತಿಯ ಕಟ್ಟಳೆಯೋ ...ತು. ಬಿಲ್ಲುಬಾಣಗಳು ಅವರ ಮಟ್ಟಿಗೆ ನಿಷಿದ್ಧಾ ...ಧ. ಭಲ್ಲೆ ಬಳಸುವುದರಲ್ಲಿ ನಿಪುಣನಾದವನಿಗೆ ...ಲ್ಲೇ ಕುಳ್ಳ ಮಲ್ಲ" ನೆಂದು ಬಿರುದು ಕೊಡು ...ರು. ಅಪ್ಪಿತಪ್ಪಿ ಯಾವ ಕುಳ್ಳ ಜಾತಿಯವ ...ದರೂ ಬಿಲ್ಲು ಹಿಡಿದನೆಂದರೆ ಅವನನ್ನು ಅಪರಾಧಿ ...ನ್ನಾಗಿ ಮಾಡಿ ಕ್ರೂರ ದಂಡನೆ ವಿಧಿಸುತ್ತಿದ್ದರು. ಆದರೆ ಅವರ ಸೇನಾ ನಾಯಕನಿಗೆ ಎಂದೋ ...ದು ದಿನ ಅರಣ್ಯದಲ್ಲೊಂದು ಕಡೆ ದೊಡ್ಡದೊಂದು ...ಲೂ ಐದಾರು ಬಾಣಗಳೂ ಸಿಕ್ಕಿದ್ದುವು. ಅವು ...ನ್ನು ಬಿಟ್ಟುಹೋಗಲು ಮನಸ್ಸು ಬಾರದೆ, ಅವನು ...ಗಳನ್ನು ಯಾರಿಗೂ ತಿಳಿಯದಂತೆ ರಹಸ್ಯವಾಗಿ ...ದು ಒಂದು ಕಡೆ ಅಡಗಿಸಿಟ್ಟಿದ್ದನು.

ಜಯಶೀಲನು ಬಿಲ್ಲುಬಾಣಗಳನ್ನು ಕೇಳಿದ ...ಡಲೇ ಏನು ಹೇಳುವುದೆಂದು ತಿಳಿಯದೆ ಕುಳ್ಳ ...ಣಿ ತಮ್ಮ ಸೇನಾ ನಾಯಕನನ್ನು ನೋಡಿದಳು. ಸೇನಾ ನಾಯಕ ಅವಳನ್ನು ನೋಡಿ ತಟ್ಟನೆ ...ಲ್ಲುಬಾಣ..." ಎಂದೇನೋ ಹೇಳಲು ಬಾಯಿ ...ದು ಮರುಕ್ಷಣ ಮೌನವಾಗಿ ಮುಖ ತಿರುಗಿಸಿ ...ಶ ನೋಡಿದನು.

ಇದನ್ನು ಗಮನಿಸಿದ ಸಿದ್ಧಸಾಧಕ, "ಏನಪ್ಪಾ, ...ಯೋಧ! ಮಾತಾಡಲಿಕ್ಕೇ ಭಯಪಡುವ ನೀನು ಸೈನಿಕರನ್ನೂ, ಟಗರು ವೀರರನ್ನೂ ಹೇಗೆ ತಾನೇ ನಡೆಸುವಿಯೋ? ಹೇಳುವುದನ್ನು ಧೈರ್ಯ ದಿಂದ ಹೇಳಬಾರದೆ?" ಎಂದನು.

ಈ ಅವಹೇಳನೆಯ ಮಾತಿನಿಂದ ಕಳ್ಳರ ಸೇನಾಪತಿ ಹೋದ ಧೈರ್ಯವನ್ನು ಒಟ್ಟುಗೂಡಿಸಿಕೊಂಡವ ನಾಗಿ, "ಮಹಾರಾಣಿ, ನಮ್ಮ ಜಾತಿಯವರು ಬಿಲ್ಲು ಬಾಣಗಳನ್ನು ಮುಟ್ಟಬಾರದೆಂಬ ನಿಯಮವಿದೆ ಯಷ್ಟೆ? ಹಾಗಿದ್ದೂ ನಾನು ಸ್ವಲ್ಪ ನಿಯಮಕ್ಕೆ ಭಂಗ ಮಾಡಿದ್ದೇನೆ. ಒಂದು ದಿನ ಅರಣ್ಯದಲ್ಲಿ ಅನಾಥವಾಗಿ ಬಿದ್ದಿದ್ದ ಬಿಲ್ಲನ್ನೂ ಕೆಲವು ಬಾಣಗಳನ್ನೂ ನೋಡಿ, ನಮಗಲ್ಲದಿದ್ದರೂ ಬೇರೆ ಯಾರಿಗಾದರೂ ಸಮಯಕ್ಕೆ ಉಪಯೋಗವಾದೀತು ಎಂದುಕೊಂಡು ತಂದು ಮನೆ ಯಲ್ಲಿ ಅಡಗಿಸಿಟ್ಟಿದ್ದೇನೆ. ಇದೊಂದು ಅಪರಾಧವೇ ಹೌದು. ಇನ್ನು ನಿಮ್ಮ ಚಿತ್ತ!" ಎಂದನು.

ಕುಳ್ಳ ರಾಣಿ ಕಣ್ಣು ಕೆಂಪು ಮಾಡಿಕೊಂಡು ಸೇನಾ ಪತಿಗೆ ಏನೋ ಹೇಳಲಿರುವುದನ್ನು ನೋಡಿ, ಜಯ



ಶೀಲನು ಕೈಯೆತ್ತಿ ಅವಳನ್ನು ಸುಮ್ಮನಿರಿಸಿ, "ಕುಬ್ಜ ರಾಣೀ, ನಿನ್ನ ಸೇನಾಪತಿ ಮಾಡಿದ ಕೆಲಸವು ನಿನ್ನ ದೃಷ್ಟಿಯಲ್ಲಿ ಎಷ್ಟು ದೊಡ್ಡ ತಪ್ಪೇ ಆದರೂ ಅವನು ಸ್ವಾರ್ಥಕ್ಕಾಗಿ ಅದನ್ನು ಬಳಸಲಿಲ್ಲ. ಆದುದರಿಂದ ಕ್ಷಮೆಗೆ ಅರ್ಹನಾಗುತ್ತಾನೆ, ಈ ಗಂತೂ ಅವನು ಮಾಡಿದ ಕೆಲಸ ಒಳ್ಳೆಯದಕ್ಕೇ ಆಗುವುದೆಂದು ನಂಬು. ಈಗ ಈ ಸಮಸ್ಯೆಯ ಚರ್ಚೆಯನ್ನು ಬಿಟ್ಟು ತತ್‌ಕ್ಷಣವೇ ಆ ಬಿಲ್ಲುಬಾಣಗಳನ್ನು ತರಿಸಿಬಿಡು. ಆ ನರವಾನರದ ಪೀಡೆಯನ್ನು ನಿವಾರಿಸಬಹುದು. ಆ ಮೇಲೆ ನಾನೇ ನನಗೆ ತಕ್ಕುದಾದ ಬಿಲ್ಲುಬಾಣಗಳನ್ನು ತಯಾರಿಸಿ ಆ ಮನುಷ್ಯನನ್ನೂ, ನರವಾನರವನ್ನೂ ಹೇಗೆ ಹತ ಮಾಡುತ್ತೇವೆಂಬುದನ್ನೂ ನೀನೇ ನೋಡುವಿ." ಎಂದನು.

ಕುಳ್ಳರ ರಾಣಿ ಶಾಂತಳಾಗಿ ತನ್ನ ಸೇನಾ ನಾಯಕನನ್ನು ನೋಡಿದಳು. ಅದರ ಅರ್ಥವನ್ನರಿತು ಸೇನಾನಿ ತನ್ನ ಟಗರುವಾಹನವನ್ನು ಓಡಿಸಿಕೊಂಡು ಹೋಗಿ, ಮರಗಳ ಮರೆಯಲ್ಲಿ ಮರೆಯಾ... ಇಷ್ಟರಲ್ಲಿ ನರವಾನರವು ಮತ್ತೊಂದು ... ಗಲ್ಲನ್ನು ಎತ್ತಿ ಹಿಡಿದುಕೊಂಡುಬಿಟ್ಟಿತ್ತು. ... ನಡುವಿಗೆ ಕಟ್ಟಿದ್ದ ಕಬ್ಬಿಣದ ಸರಪಳಿಯನ್ನು ಹಿಡಿ... ಮನುಷ್ಯನು ಕೋಪ ಕರ್ಕಶ ಸ್ವರದಿಂದ ಕೂಗು... ಕತ್ತಿಯ ಹಿಡಿಯಿಂದ ಅದರ ಬೆನ್ನಿನ ಮೇಲೆ ... ದನು. ಕುಪಿತವಾದ ನರವಾನರವು ಅವನಿಗೆ ... ತೋರಿಸಿ ಹೆದರಿಸುತ್ತ ಪಕ್ಕಕ್ಕೆ ತಿರುಗಿ, ಬಂಡೆಗ... ಅವನ ತಲೆಯ ಮೇಲೆಯೇ ಹಾಕಲು ನೋಡಿ... ಆಗ ಅವನು ಕತ್ತಿ ಮೊನೆಯನ್ನು ಅದರ ... ಆನಿಸಿ ಹಿಡಿದು ಜೋರಾಗಿ ಕೂಗುತ್ತ ಹೆದರಿಸಿ...

ಆ ಮನುಷ್ಯನ ಕೂಗನ್ನೂ ಹಾವಭಾವ ... ವಲನಗಳನ್ನೂ ಕೆಳಗಿನಿಂದ ನೋಡುತ್ತಿರುವ ... ಶೀಲನಿಗೆ ಅವನ ಗುರುತು ಸ್ಪಷ್ಟವಾಗಿ ... ಬಿಟ್ಟಿತು. ಅವನು ಸಂತೋಷದಿಂದೊಂದು ... ನೆಯ ಸಿಳ್ಳು ಹಾಕಿ, ಸಿದ್ಧಸಾಧಕನನ್ನು ನೋ... ಕಣ್ಣು ಹಾರಿಸುತ್ತ, "ತಿಳಿಯಿತು ಸಿದ್ಧಸಾಧಕಾ! ... ಮನುಷ್ಯ ಯಾರೆಂಬುದು ಗೊತ್ತಾಗಿಹೋಯಿ... ಅವನು ನಮ್ಮ ಅಮರಾವತೀ ನಗರದವನು. ... ಹುಟ್ಟಿ ಬೆಳೆದ ಊರನ್ನು ಬಿಟ್ಟು ದೇಶಾಂ... ಹೊರಟು, ನಿಮ್ಮ ಹಿರಣ್ಯಪುರವನ್ನು ತಲುಪಿ ... ಕಾಡುಮೇಡು ತಿರುಗುವಂತಾದುದಕ್ಕೆ ಕಾರಣ... ವನೇ ಇವನು. ಆಗ ಇವನು ನಮ್ಮ ರಾಜ ... ಸೇನನ ಹತ್ತಿರ ಅಶ್ವದಳನಾಯಕನಾಗಿದ್ದ. ... ಜೋರಿನವ! ಹೆಸರು ಕೃಪಾಣಜಿತ್ತು!" ಎಂದ...

ಜಯಶೀಲನ ಮಾತಿನಿಂದ ಸಿದ್ಧಸಾಧಕ... ಅತ್ಯಾಶ್ಚರ್ಯಪಡುತ್ತ, "ಹಾಗಾದರೆ ಇದೊಂ... ಅದ್ಭುತವೇ ಸರಿ. ಅಮರಾವತೀ ನಗರವೆಲ್ಲಿ? ... ಕಾಡು ಪ್ರದೇಶವೆಲ್ಲಿ? ಇಲ್ಲಿ ನಿನ್ನ ಹಳೆಯ ಶತ್ರು... ಹಾಗಾದರೆ ಈಗ ನೀನು ಏನು ಮಾಡಬೇ... ದಿರುವೆ?" ಎಂದು ಕೇಳಿದನು.

ಜಯಶೀಲನು ಸ್ವಲ್ಪ ಹೊತ್ತು ಆ ಬೆಟ್ಟವನ್ನು ...ಡುತ್ತಾ ಸುಮ್ಮನಿದ್ದು, ಸಿದ್ಧಸಾಧಕ! ಅವನನ್ನು ...ಗಾದರೂ ಕೊಂದುಬಿಡಲಿಕ್ಕೆ ನನಗಿಷ್ಟವಿಲ್ಲ. ...ನ್ನು ಕೊಂದವನು ಯಾರೆಂಬುದು ಅವನಿಗೆ ...ಗಬೇಕು. ಅವನೀಗ ಆ ನರವಾನರದೊಂದಿಗೆ ...ದಿದ ಕೆಲಸವನ್ನೇ ಮಾಡಲು ಒತ್ತಾಯಿಸು ...ನೆ. ಅದಕ್ಕೆ ಕೋಪ ಬಂದಿದೆ. ಗುರಿ ನೋಡಿ ...ಗಲ್ಲು ಬಿಸುಡುವ ಸಾಧನೆ ಇನ್ನೂ ಅದಕ್ಕೆ ...ಲ್ಲ. ಅಷ್ಟರೊಳಗೆ ಅವನಿಗೆ ಅವಸರವೆಂದರೆ ...ೋ ಸ್ವಾರ್ಥವಿರಬೇಕು. ಅದೀಗ ಅವನ ಮೇಲೇ ...ಗಿ ಬಿದ್ದರೂ ಆಶ್ಚರ್ಯವೇನಿಲ್ಲ." ಎಂದನು.

ಜಯಶೀಲನು ಹೀಗೆ ಮಾತಾಡುತ್ತಿರುವಾಗಲೇ ...ರ ಸೇನಾಪತಿ, ಬಿಲ್ಲುಬಾಣಗಳನ್ನು ಹೊತ್ತು ...ಡು ಅಲ್ಲಿಗೆ ಬಂದು ಟಗರುವಾಹನದಿಂದಿಳಿದು, ...ು ತಂದವುಗಳನ್ನು ಜಯಶೀಲನ ಪಾದಗಳ ...ರ ಇಟ್ಟನು. ಜಯಶೀಲನು ಬಿಲ್ಲನ್ನು ಪರೀಕ್ಷಿಸಿ ...ಡಿದನು.

ದೃಢವಾದ ಬಿಲ್ಲು. ತೀಕ್ಷ್ಣವಾದ ಆರು ಬಾಣಗಳು! ಸಿದ್ಧಸಾಧಕನು ಅವುಗಳನ್ನು ನೋಡಿ, "ಇನ್ನೇನು? ಜಯಶೀಲಾ, ನಿನ್ನ ಶತ್ರು ಆ ಕೃಪಾಣಜಿತ್ತನ್ನೂ ಆ ನರವಾನರಕ್ಕೆ ಜತೆಯಾಗಿ ಪರಲೋಕಕ್ಕೆ ಕಳುಹಿಸಿಬಿಡಬಹುದು! ಮೊದಲು ನಿನ್ನ ಹೆಸರನ್ನು ಕೂಗಿ ಹೇಳಿಬಿಡು." ಎಂದನು.

ಜಯಶೀಲನು ನಕ್ಕು, "ಸಾಧಕಾ, ಇಷ್ಟೊಂದು ದೂರದಿಂದ ಆ ಇಬ್ಬರನ್ನೂ ಗುರಿ ನೋಡಿ ಬಾಣದಿಂದ ಹೊಡೆಯುವುದು ಸುಲಭವೆಂದುಕೊಂಡೆಯಾ? ಇವು ಸಾಧಾರಣ ಬೇಟೆಯ ಬಾಣಗಳು. ಇಂದ್ರಾಸ್ತ್ರ ನಾಗಾಸ್ತ್ರಗಳೇನಲ್ಲ!" ಎಂದನು.

ಇಷ್ಟರಲ್ಲಿ ಬೆಟ್ಟದ ತಲೆಯಲ್ಲಿರುವ ಆ ನರವಾನರವು ತುಂಬ ರೋಷದಿಂದ ಕೆರಳಿಬಿಟ್ಟಿತ್ತು. ನರ ಮತ್ತು ನರವಾನರಗಳದೊಂದು ಹೋರಾಟದ ಗಲಭೆ! ಅದು ತನಗೆ ಪಾಠ ಕಲಿಸುವವನ ಮೇಲೆಯೇ ತಿರುಗಿಬಿದ್ದು ಬಂಡೆಗಲ್ಲಿನಿಂದ ಅವನನ್ನು ಹೊಡೆಯಲಿಕ್ಕೆ ನೋಡುವುದೂ, ಅವನು ಕತ್ತಿಯ ಮೊನೆಯಿಂದ ಅದನ್ನು






ಚುಚ್ಚುವುದೂ, ಅದು ಆಚೆಗೂ ಈಚೆಗೂ ಹಾರುವುದೂ ಪ್ರಾರಂಭವಾಯಿತು.

ಅಷ್ಟರಲ್ಲಿ ಅಲ್ಲಿಗೆ ನಾಲ್ಕೈದು ಮಂದಿ ಕುಳ್ಳ ಜನರು ಬಂದರು. ಅವರನ್ನು ನೋಡಿ ಕೃಪಾಣಜಿತ್ತುವಿಗೆ ಧೈರ್ಯಬಂದು ಅವರಿಗೆ ಸನ್ನೆಗಳನ್ನು ಮಾಡಿದನು. ಅವರ ಕೈಗಳಲ್ಲಿ ಹಗ್ಗವಿದ್ದಿತು. ಅವರು ಸ್ವಲ್ಪ ದೂರದಲ್ಲಿದ್ದು ಹಗ್ಗವನ್ನು ಬೀಸಿ ನರವಾನರದ ಕಾಲುಗಳನ್ನೂ ಕೈಗಳನ್ನೂ ಉರುಳಿನಿಂದ ಬಂಧಿಸಿಬಿಟ್ಟರು. ನರವಾನರವು ಬಂಡೆಯ ತುಂಡನ್ನು ಕೆಳಗೆ ಮೇಲೆತ್ತಿ ಇನ್ನೂ ಹೋರಾಡುತ್ತಲೇ ಇತ್ತು.

ಗಳನ್ನು ತಯಾರಿಸಿ ಆ ಪಲ್ಲಿದನ್ನು ನೋಡಿ ಉತ್ಸಾಹ
ವನ್ನೂ ಹೇಗೆ ಹತ ಮಾಡುತ "ಅಯ್ಯೋ, ಆ ಭಯಂಕರ
ನೋಡುವಿ." ಎಂದನು. ಒಳ್ಳೇ ಸಮಯ. ಗುರಿ

ಕುಳ್ಳರ ರಾಣಿ ಶಾಂತಳಾಗಿ ತ" ಎಂದನು.
ನನ್ನು ನೋಡಿದಳು. ಅದರ ಹೌದು ಹೌದೆಂದು
ಸೇನಾನಿ ತನ್ನ ಟಗರುವಾಹನವನ್ನು ನುಷ್ಯನಿಗಿಂತಲೂ

ನರವಾನರಕ್ಕೇ ಹೆಚ್ಚಿಗೆ ಹೆದರುತ್ತೇವೆ. ಅದ ಭಯವನ್ನೊಂದು ಪರಿಹರಿಸಿಬಿಟ್ಟರೆಂದರೆ, ಜಾತಿ ಅಹಂಕಾರದಿಂದ ನಮ್ಮನ್ನು ನಾಶ ಮಾಡಬೇಕೆಂ ರುವ ದುಷ್ಟ ಗಡೇಗುಡ್ಡನನ್ನೂ ಅವನ ಅನು ರನ್ನೂ ಒಂದೆರಡು ದಿನಗಳಲ್ಲೇ ನಿರ್ನಾಮ ಮಾ ಬಿಡಬಲ್ಲೆವು" ಎಂದಳು.

ಅಷ್ಟು ದೂರದಿಂದ ಬೆಟ್ಟದ ಮೇಲಕ್ಕೆ ಗು ಯಿಟ್ಟು ಬಾಣಪ್ರಯೋಗ ಮಾಡುವುದು ಸಾ ವೆಂದು ಜಯಶೀಲನಿಗೆ ತೋರಲಿಲ್ಲ. ಆದರೂ ತಾ ಆ ಪ್ರಾಂತಕ್ಕೆ ಬಂದಿರುವ ಸಂಗತಿ ಶತ್ರುಗಳಿ ಮುಖ್ಯವಾಗಿ ಕೃಪಾಣಜಿತ್ತುವಿಗೆ ತಿಳಿಯುವ ಏನಾದರೂ ಮಾಡಬೇಕೆಂದುಕೊಂಡನು. ಯುದ್ಧ ಧರ್ಮವನ್ನು ಮೀರಿದಂತಾಗಬಾರದೆಂಬ ಪ್ರ ಯಿಂದ ಅವನು ಸ್ವಲ್ಪ ಮುಂದೆ ಹೋಗಿ ಅ ದ್ದೊಂದು ಎತ್ತರವಾದ ಬಂಡೆಯ ಮೇಲೆ ನಿಂತು ಕತ್ತಿಯನ್ನು ಮೇಲೆತ್ತಿ ಕುಣಿಸುತ್ತ, "ಎಲೋ ನೀಚನೇ! ಕೃಪಾಣಜಿತ್ತೂ! ಇಕೋ, ನನ್ನ ನೋಡು! ನಾನು ಜಯಶೀಲ! ಬಂದಿದ್ದೇನೆ" ಎಂ ಕೂಗಿ ಹೇಳಿದ.

ಅವನ ಕೂಗನ್ನು ಬೆಟ್ಟದ ಮೇಲಿನವರು ಕೇ ಕೊಂಡಂತೆ ಕಾಣಲಿಲ್ಲ. ಕೃಪಾಣಜಿತ್ತುವಿನೂ ಉಳಿದ ಕಳ್ಳರು ಸೇರಿ, ಆ ನರವಾನರವನ್ನು ಅದ ಲಿಕ್ಕೆ ಉರುಳಾಡಿಕೊಂಡಿದ್ದರು. ಕೃಪಾಣಜಿ ವಾನರದ ನಡುವಿಗೆ ಬಿಗಿದ ಕಬ್ಬಿಣದ ಸರಪಳಿಯ ಬಲವಾಗಿ ಆಡಿಸಿ ಹಿಂದಕ್ಕೆಳೆಯುತ್ತಿದ್ದ. ಕುಳ್ಳ ಅದರ ಕಾಲು ಕೈಗಳಿಗೆ ತಗಲಿಸಿದ ಹಗ್ಗ ಮುಂದಕ್ಕೂ ಹಿಂದಕ್ಕೂ ಎಳೆಯುತ್ತಿದ್ದರು. ಅವರನ್ನು ಕಚ್ಚಲು ನೋಡುತ್ತ, ಭಯಂಕರ ಕೂಗುತ್ತ ತಪ್ಪಿಸಿಕೊಳ್ಳಲು ಹೆಣಗುತ್ತಿತ್ತು. ಆ ಗುರಿಯಿಟ್ಟು ಏನನ್ನು ಹೊಡೆಯಲೂ ಸಾಧ್ ಕತ್ತಿ ಎತ್ತಿಕೊಂಡು ನಿಂತಿದ್ದ ಜಯಶೀಲನ

ಸಿದ್ಧಸಾಧಕನೂ, ಕುಳ್ಳರ ರಾಣಿಯೂ ಬಂದರು. ಸಿದ್ಧಸಾಧಕನು ಜಯಶೀಲನನ್ನು ಕುರಿತು, "ಇದೇಕೆ ಇಲ್ಲಿ ನಿಂತಿರುವೆ? ರಾಣಿಯೂ ಆಕೆಯ ಸೈನಿಕರೂ ಶತ್ರುಗಳನ್ನು ಹತ ಮಾಡಲು ಇದೇ ತಕ್ಕ ಸಮಯವೆಂದು ಭಾವಿಸುತ್ತಾರೆ. ನರವಾನರವನ್ನು ಹಗ್ಗದಿಂದ ಕಟ್ಟಿ ಎಳೆಯುತ್ತಿರುವವರಲ್ಲಿ ರಾಣಿಯ ಮುಖ್ಯ ಶತ್ರುಗಳಾಗಿದ್ದ ಗಡೇಗುಡ್ಡ ಎಂಬವನೂ ಅಲ್ಲಿದ್ದಾನಂತೆ. ಅಲ್ಲಿರುವ ಕುಳ್ಳರ ಮಧ್ಯದಲ್ಲಿ ತಲೆಯ ಮೇಲೆ ಹದ್ದಿನ ಗರಿಗಳನ್ನು ಕಟ್ಟಿಕೊಂಡ ಕುಳ್ಳ ಕಾಣಿಸುತ್ತಾನೆಯೋ? ಅವನೇ ಗಡೇಗುಡ್ಡ. ಈ ರಗಳೆಗಳಿಗೆಲ್ಲ ಸೂತ್ರಧಾರ." ಎಂದನು.

ಜಯಶೀಲನು ಬೆಟ್ಟದಲ್ಲಿ ಕಾಣುವ ಪ್ರತಿಯೊಬ್ಬನನ್ನೂ ಪರೀಕ್ಷಿಸಿ ನೋಡಿದನು. ಅವರಲ್ಲಿ ಸಿದ್ಧಸಾಧಕನು ಹೇಳಿದಂತೆ ಹದ್ದಿನ ಗರಿಯ ತಲೆಯುವವನೊಬ್ಬನಿದ್ದ. ಅವನೇ ಗಡೇಗುಡ್ಡನೇನು? ಅವನು ಈ ಗಡೇಕಾರೀ ರಾಣಿಗೆ ಶತ್ರುವಾಗಿದ್ದರೂ ಜಯಶೀಲನಿಗೂ ಅವನಿಗೂ ಯಾವ ಸಂಬಂಧವಿದೆ? ಏನು ಶತ್ರುತ್ವವಿದೆ? ಅವನ ಶತ್ರುವೆಂದರೆ ಆ ಕೃಪಾಣಚಿತ್ತು ಮಾತ್ರ. ನರವಾನರ ಪ್ರಾಣಿಯ ಮೇಲೆಯೂ ಅವನಿಗೇನೂ ವೈರವಿಲ್ಲ. ತಾನು ಬಾಣ ಪ್ರಯೋಗ ಮಾಡುವುದಾಗಿದ್ದರೆ ಅವನೊಬ್ಬನನ್ನೇ ಹೊಡೆಯಬೇಕಾದುದೆಂದು ಜಯಶೀಲನು ಅಂದುಕೊಂಡನು.

ಅವನು ಬಿಲ್ಲುಬಾಣಗಳನ್ನು ಹಿಡಿದುಕೊಂಡು ತನ್ನ ಹಿಂದಿರುವವರನ್ನು ಒಮ್ಮೆ ನೋಡಿದನು. ಟಗರು ಸವಾರರಾದ ಅನೇಕ ಮಂದಿ ಕುಳ್ಳ ವೀರರೂ, ಅವರ ಹಿಂದೆ ಭಲ್ಲೆಗಳನ್ನು ಹಿಡಿದುಕೊಂಡಿರುವ ಕುಳ್ಳ ಸೈನಿಕರೂ ಬೆಟ್ಟದ ಮೇಲೆ ಏರಿ ಹೋಗಲು ಸಿದ್ಧರಾಗಿ ನಿಂತಿದ್ದರು.

ಜಯಶೀಲನು ಕುಳ್ಳರ ರಾಣಿಯನ್ನು ನೋಡಿ, "ರಾಣಿ, ನಿಮ್ಮವರೆಲ್ಲಾ ಯುದ್ಧಕ್ಕೆ ಸಿದ್ಧರಾಗಿರುವಂತಿದೆ. ನಾನು ಒಂದೇ ಬಾಣದಿಂದ ನರವಾನರವನ್ನೂ, ಆ ಮನುಷ್ಯನನ್ನೂ ಕೊಂದುಬಿಡುವೆನೆಂದು ಭಾವಿಸಿಬಿಡಬೇಡ. ನನ್ನದೊಂದು ಬಾಣ ಹಾರಿದ ಕೂಡಲೇ ಅದು ಯಾರಿಗೆ ತಗಲುವುದೋ ಹೇಳ



ಲಾಗುವುದಿಲ್ಲ. ಅಂತೂ ಬಾಣ ಬಿದ್ದ ಕೂಡಲೇ ಶತ್ರುಗಳು ತಕ್ಕ ಜಾಗ್ರತೆ ತೆಗೆದುಕೊಳ್ಳುತ್ತಾರೆ. ಅವರೊಂದಿಗೆ ಯುದ್ಧ ಮಾಡಲು ಇದು ಒಳ್ಳೆಯ ಸಮಯ ಹೌದೋ ಅಲ್ಲವೋ ಎಂಬುದನ್ನು ನೀನೇ ಆಲೋಚಿಸು." ಎಂದನು.

ಕಳ್ಳರ ರಾಣಿ ತನ್ನ ಸೇನಾಪತಿಯ ಅಭಿಪ್ರಾಯ ಹೇಗೆಂದು ತಿಳಿಯಲು ಅವನ ಮುಖ ನೋಡಿದಳು. ಆ ಕಳ್ಳ ಸೇನಾಪತಿ ತನ್ನ ಟಗರುವಾಹನದ ಮೇಲೆ, ಬಹು ಠೀವಿಯಿಂದ, ಭಲ್ಲೆಯನ್ನೆತ್ತಿ ಕುಣಿಸುತ್ತ ಜಯಶೀಲನೊಂದಿಗೆ "ಅಯ್ಯಾ. ನೀವು ಆ ದುಷ್ಟರ ಗುಂಪಿಗೆ ಒಂದು ಬಾಣ ಹೊಡೆಯಿರಿ ಸಾಕು. ಇಷ್ಟರವರೆಗೂ ನಮ್ಮ ಶತ್ರುಗಳು ಭಲ್ಲೆಯ ಹೊಡೆತ ಎಂತಹುದೆಂದು ಮಾತ್ರ ತಿಳಿದಿದ್ದಾರೆ. ಬಾಣದ ಏಟು ಹೇಗೆಂಬುದನ್ನು ಅರಿಯರು. ನಿಮ್ಮ ಬಾಣ ಹೋಗಿ ತಾಗಿದ ಕೂಡಲೇ ಅವರು ಭೀತಿಯಿಂದ ತತ್ತಳಿಸಿ ಹೋಗುತ್ತಾರೆ. ಅದನ್ನು ಅವಕಾಶ ಮಾಡಿಕೊಂಡು ನಾವು ದಾಳಿ ಮಾಡಿ ಅವರನ್ನೆಲ್ಲಾ ಆ ಬೆಟ್ಟದ ಆಚೆವರೆಗೂ ಪುಡಿ ಹಾರಿಸಿಬಿಡುತ್ತೇವೆ. ಸಾಧ್ಯವಿದ್ದರೆ ಅವರ ಪಾಳ್ಯದ ಮೇಲೂ ಬಿದ್ದು ಬೆಂಕಿ ಹಚ್ಚಿಬಿಡುತ್ತೇವೆ" ಎಂದನು.

"ಆದರೆ, ಅಪ್ಪಾ, ಸೇನಾಪತಿಯೇ, ನಿನಗಿರುವ ಉತ್ಸಾಹದಭರದಲ್ಲಿ ಕತ್ತಿ ಹಿಡಿದ ಮನುಷ್ಯನನ್ನೂ ಆ ನರವಾನರವನ್ನೂ ಮರೆತುಬಿಟ್ಟ ಹಾಗಿದೆ. ಆದರೂ ನಿನ್ನ ಶಕ್ತಿಯನ್ನೂ, ನಿನ್ನ ಕಡೆಯವರ ಶಕ್ತಿಯನ್ನೂ ನೋಡಬೇಕೆಂದು ಬಹಳ ಆಸೆಯಾಗಿದೆ ನನಗೆ" ಎಂದು ಜಯಶೀಲನು ಬಿಲ್ಲನ್ನು ಎತ್ತಿದನು.

ಆಗ ಸಿದ್ಧಸಾಧಕನು ತನ್ನ ಶೂಲವನ್ನೆತ್ತಿ, "ಜೈ! ಮಹಾಕಾಳಾ! ಇದು ಒಳ್ಳೆಯ ಸಮಯ! ಜಯಶೀಲಾ! ಬಾಣ ಹೊಡಿ. ನರವಾನರವು ಆ ಕಳ್ಳ ಮಂದಿ ಬೀಸಿದ ಹಗ್ಗದ ಕಟ್ಟನ್ನು ಕಡಿದುಕೊಂಡು ಒಬ್ಬ ಕಳ್ಳನನ್ನು ಆಮುಕಿ ಹಿಡಿಯಿತು." ಎಂದು ಕೂಗಿದನು.

ಜಯಶೀಲನು ಬಾಣವನ್ನು ಬಿಲ್ಲಿಗೆ ಸಂಧಿಸಿ ನಾಣೆಳೆದು ನರವಾನರಕ್ಕೆ ಗುರಿಯಿಟ್ಟು ಪ್ರಯೋಗಿಸಿದನು. ಬಾಣವು ರಿವ್ವನೆ ಹೋಗಿ ನರವಾನರದ ಸೊಂಟಕ್ಕೆ ಹೊಕ್ಕು, ಅದನ್ನು ಅಷ್ಟೆತ್ತರಕ್ಕೆ ಹಾರಿ ಕೆಡವಿತು. ಅದು ಒಮ್ಮೆಗೇ ಭೀಕರವಾಗಿ ಅರಚುತ್ತ ಕೈಯಲ್ಲಿದ್ದ ಕಳ್ಳನನ್ನು ಕೆಳಕ್ಕೆ ಕುಕ್ಕಿ ತಾನೂ ಬಿತ್ತು.

ಕೆಳಕ್ಕೆ ಕುಕ್ಕಲ್ಪಟ್ಟಕಳ್ಳನು ಕಿರುಚುತ್ತ ಹಾರಿಕೆಳಗೆ ಬೀಳುವಾಗ, ಕಳ್ಳರ ಸೇನಾನಾಯಕನು ತನ್ನ ಅನುಚರರಿಗೆ ಸನ್ನೆ ಮಾಡಿದನು. ತತ್‌ಕ್ಷಣವೇ ಟಗರು ರಾವುತರೂ, ಕಾಲಾಳುಗಳೂ ಕೇಕೇ ಹಾರುತ್ತ ಭಲ್ಲೆಗಳನ್ನು ಕುಣಿಸುತ್ತ ಬೆಟ್ಟದ ಮೇಲಕ್ಕೆ ಓಡತೊಡಗಿದರು. (ಮುಂದುವರಿಯುವುದು)






ದುಃಖದಲ್ಲಿ ಮುಳುಗಿಹೋದ ರಾಮನಿಗೆ ವಿಭೀಷಣನು ಹೇಳಿದ ಮಾತುಗಳೊಂದೂ ಕಿವಿಯೊಳಗೆ ಸೇರಲೇ ಇಲ್ಲ. ಆದುದರಿಂದ ಅವನು ಸ್ವಲ್ಪ ಹೊತ್ತಿನ ಮೇಲೆ ತನ್ನನ್ನು ತಾನು ನಿಗ್ರಹಿಸಿಕೊಂಡು, ವಿಭೀಷಣನನ್ನು ನೋಡಿ, "ವಿಭೀಷಣಾ, ನೀನೇನೋ ಹೇಳಿದೆಯಲ್ಲ? ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಇನ್ನೊಮ್ಮೆ ಹೇಳಯ್ಯ" ಎಂದನು. ವಿಭೀಷಣನು ಹೀಗೆಂದನು:

"ರಾಮಾ, ನೀನು ಕಾರಣವೇನಿಲ್ಲದೆ ದುಃಖಿಸುತ್ತ ಕಾಲಹರಣ ಮಾಡುವುದನ್ನು ನೋಡಿದರೆ ನಮಗೂ ದುಃಖವಾಗುತ್ತದೆ. ಹೀಗಾಗುವುದರಿಂದ ಸಂತೋಷಪಡುವವರು ನಿನ್ನ ಶತ್ರುಗಳೇ. ರಾಕ್ಷಸರನ್ನು ಕೊಲ್ಲುವುದೂ, ಸೀತೆಯನ್ನು ಮತ್ತೆ ತಂದು ಕೊಳ್ಳುವುದೂ ನಿನ್ನ ಉದ್ದೇಶವೆಂಬುದು ನಿಜವಾಗಿರುವ ಪಕ್ಷದಲ್ಲಿ ಬೇಗನೇ ಯುದ್ಧಕ್ಕೆ ಆಜ್ಞೆಮಾಡು. ಲಕ್ಷ್ಮಣನನ್ನು ವಾನರಸೇನೆಯೊಂದಿಗೆ ನಿಕುಂಭಿಳೆಗೆ ಕಳುಹಿಸು. ಇಂದ್ರಜಿತ್ತುವಿನೊಡನೆ ಯುದ್ಧ ಮಾಡಿ ಅವನನ್ನು ಕೊಲ್ಲಲಿಕ್ಕೆ ಲಕ್ಷ್ಮಣನಿಗೆ ಹೇಳು. ಇಂದ್ರಜಿತ್ತು ಮುಖ್ಯವಾದೊಂದು ಹೋಮವನ್ನು ಮಾಡಲು ನಿಕುಂಭಿಳೆಗೆ ಹೋಗಿದ್ದಾನೆ. ಅವನು ಆ ಹೋಮವನ್ನು ಪೂರ್ತಿ ಮಾಡಿಬಿಟ್ಟನೆಂದರೆ ನಮಗೆಲ್ಲರಿಗೂ ಸಾವು ತಪ್ಪದು. ಅದು ಬ್ರಹ್ಮದೇವನು ಇಂದ್ರಜಿತ್ತುವಿಗೆ ಕೊಟ್ಟ ವರ. ಅವನ ನಿಕುಂಭಿಳಾಯಾಗವು ಪೂರ್ತಿಯಾಗದಂತೆ ಅಡ್ಡ ತಗಲುವವನ ಕೈಯಲ್ಲಿಯೇ ಅವನ ಮರಣವೆಂದು ಬ್ರಹ್ಮಶಾಸನ. ಇಂದ್ರಜಿತ್ತು ಸತ್ತುಬಿಟ್ಟನೆಂದರೆ ರಾವಣನೂ ಉಳಿದವರೂ ಸತ್ತ ಹಾಗೇ ಆಗುತ್ತದೆ. ಈಗ ತ್ವರೆ ಮಾಡಬೇಕು."

ಕೂಡಲೇ ರಾಮನು ಲಕ್ಷ್ಮಣನೊಂದಿಗೆ ಇಂದ್ರಜಿತ್ತುವನ್ನು ಕೊಂದುಬರುವಂತೆ ಹೇಳಿದನು. ಲಕ್ಷ್ಮಣನು ಬಲವಾದ ವಾನರ ಸೈನ್ಯವನ್ನೂ ಭಲ್ಲೂಕರ ಗುಂಪನ್ನೂ ಕರೆದುಕೊಂಡು ಸಿದ್ಧನಾದನು. ನಿಕುಂಭಿಳೆಗೆ ದಾರಿ ತೋರಿಸಲು ವಿಭೀಷಣನೂ ಹೊರಟನು. ಲಕ್ಷ್ಮಣನ ಜತೆಯಲ್ಲಿ ಹನುಮಂತನೂ ತಾನಾಗಿ ಹೊರಟನು.



29-1



ಈ ಯುದ್ಧಕ್ಕೆ ಲಕ್ಷ್ಮಣನು ಬಂಗಾರದಿಂದ ಅಲಂಕರಿಸ್ಪಟ್ಟ ಧನುರ್ಬಾಣಗಳನ್ನು ಹಿಡಿದಿದ್ದನು. ಅಭೇದ್ಯವೆನಿಸುವಂತಹ ಕವಚವನ್ನು ತೊಟ್ಟಿದ್ದನು. ವಿಭೀಷಣನು ಕೂಡಾ ಒಳ್ಳೆಯ ಬಿಲ್ಲನ್ನೂ, ಬಾಣಗಳನ್ನೂ ತೆಗೆದುಕೊಂಡಿದ್ದನು. ಹೀಗೆ ಅವರೆಲ್ಲ ಬೇಗಬೇಗನೆ ಹೋಗಿ ನಿಕುಂಭಿಳೆಯನ್ನು ತಲಪಿದರು. ದೂರದಲ್ಲಿ ವ್ಯೂಹವಾಗಿ ನಿಂತಿರುವ ರಾಕ್ಷಸ ಸೇನೆ ಅವರಿಗೆ ಕಾಣಿಸಿತು.

ವಿಭೀಷಣನು ಲಕ್ಷ್ಮಣನಿಗೆ ಆ ರಾಕ್ಷಸ ಸೇನೆಯನ್ನು ತೋರಿಸುತ್ತ, "ಇಂದ್ರಜಿತ್ತು ಆ ರಾಕ್ಷಸರ ಕೋಟೆಯ ನಡುವಿನಲ್ಲಿ ಹೋಮ ಮಾಡುತ್ತಿದ್ದಾನೆ. ಅದು ಪೂರ್ತಿಯಾಗುವುದಕ್ಕೆ ಮೊದಲೇ ನಮ್ಮ ವಾನರ ಸೇನೆ ಈ ರಾಕ್ಷಸ ಸೇನೆಯನ್ನು ಚೆದರಿಸಿ ನಾಶ ಮಾಡಲಿ. ನೀನು ಈ ಭಾಗದ ಸೇನೆಯನ್ನೂ ಭೇದಿಸು. ಆಗ ಹೋಮ ಕಾರ್ಯದಲ್ಲಿರುವ ಇಂದ್ರಜಿತ್ತು ನಿನ್ನ ಕಣ್ಣಿಗೆ ಬೀಳುವನು. ನೀನು ಪೂರ್ಣ ಸಾಮರ್ಥ್ಯವನ್ನು ಪ್ರದರ್ಶಿಸಿ ಯುದ್ಧ ಮಾಡಿದೆಯಾದರೆ ಇಂದ್ರಜಿತ್ತು ಸಾಯುವನು. ನಿನ್ನ ಕೈಯಲ್ಲೇ ಅವನಿಗೆ ಮರಣ." ಎಂದನು.

ಕೂಡಲೇ ವಾನರರೂ, ಭಲ್ಲೂಕಗಳೂ, ಲಕ್ಷ್ಮಣನೂ ರಾಕ್ಷಸರ ಸೇನೆಯ ಮೇಲೆ ಒಳ್ಳೆಯ ರಭಸದಿಂದ ದಾರುಣವಾದ ಯುದ್ಧವನ್ನು ಪ್ರಾರಂಭಿಸಿದರು. ಹೀಗೆ ಎದ್ದ ದೊಡ್ಡ ಕೋಲಾಹಲವು ಇಂದ್ರಜಿತ್ತುವಿನ ಹೋಮ ದೀಕ್ಷೆಯನ್ನು ಭಗ್ನಮಾಡಿಸಿತು. ತನ್ನ ಸೇನೆಯಲ್ಲಿ ಎದ್ದ ಹಾಹಾಕಾರಗಳನ್ನು ಕೇಳಿ ಇಂದ್ರಜಿತ್ತು ಹೋಮವನ್ನು ಅರ್ಧದಲ್ಲೇ ಬಿಟ್ಟು ಎದ್ದು ನಿಲ್ಲಲೇ ಬೇಕಾಯಿತು. ಮತ್ತೆ ಅವನು ಹೋಮವನ್ನು ಮುಗಿಸಲಾರದೆ, ತುಂಬ ರೌದ್ರಾಕಾರನಾಗಿ ಎದ್ದು, ತನ್ನ ರಥವನ್ನೇರಿ ಯುದ್ಧಕ್ಕೆ ಸಿದ್ಧನಾಗಿ ಬಂದನು.

ವಿಭೀಷಣನು ಮುಂದೆ ಹೋಗಲು, ಒಂದು ಮಹಾವನವು ಕಾಣಿಸಿತು. ಇಂದ್ರಜಿತ್ತು ಹೋಮ ಮಾಡುವ ಸ್ಥಳವು ಆ ವನದಲ್ಲಿದ್ದಿತು. ಅಲ್ಲಿರುವ ಪ್ರತ್ಯೇಕವಾದೊಂದು ಕಪ್ಪು ಬಣ್ಣದ ಭಯಂಕರಾಕಾರವಾಗಿರುವ ಮರದ ಬುಡದಲ್ಲಿ ಆ ಹೋಮವು ನಡೆಯುತ್ತಿತ್ತು. ಇಂದ್ರಜಿತ್ತು ಅಲ್ಲಿ ಭೂತಗಳಿಗೆ ಬಲಿಕೊಟ್ಟು ಹೋಮವನ್ನು ಮುಗಿಸಿ, ಯುದ್ಧಕ್ಕೆ ಸಿದ್ಧನಾಗಿ ಎದ್ದು, ಯಾರಿಗೂ ಕಾಣದಂತೆ ತಾನು ಮಾತ್ರ ಎಲ್ಲರನ್ನೂ ನೋಡುತ್ತ ಯುದ್ಧ ಮಾಡುವನು. ಆ ಸ್ಥಿತಿಯಲ್ಲಿ ಅವನನ್ನು ಕೊಲ್ಲಲು ಯಾವನಿಗೂ ಸಾಧ್ಯವಾಗದು.

ಈ ಸಂಗತಿಯನ್ನೆಲ್ಲ ವಿಭೀಷಣನಿಂದ ಚೆನ್ನಾಗಿ ತಿಳಿದ ಲಕ್ಷ್ಮಣನು ಯುದ್ಧಸನ್ನದ್ಧನಾಗಿ ಆ ಮಹಾವೃಕ್ಷದ ಬಳಿಗೆ ಹೋಗಿ ನಿಂತನು. ಅಷ್ಟರಲ್ಲೇ ಅರ್ಧ ಹೋಮದಿಂದೆದ್ದ ಇಂದ್ರಜಿತ್ತು ರಥವನ್ನೇರಿ ಅವನ ಇದಿರಾಗಿಯೇ ಬಂದನು.

"ರಾಮನ ತಮ್ಮ ಲಕ್ಷ್ಮಣನೆಂಬ ನಾನು ನಿನ್ನನ್ನು ಯುದ್ಧಕ್ಕೆ ಕರೆಯುತ್ತಿದ್ದೇನೆ. ನನ್ನ ಮುಂದೆ ಸರಿ



21-2

ಯಾಗಿ ನಿಂತು ಯುದ್ಧ ಮಾಡು. ಓಡಬೇಡ” ಎಂದು ಲಕ್ಷ್ಮಣನು ಉಚ್ಚಕಂಠದಿಂದ ಇಂದ್ರಜಿತ್ತುವಿಗೆ ಆಜ್ಞಾಪಿಸಿದನು.

ಇಂದ್ರಜಿತ್ತು ಲಕ್ಷ್ಮಣನ ಮಾತನ್ನು ಕೇಳಿ, ಅವನ ಹಿಂದೆ ನಿಂತಿರುವ ವಿಭೀಷಣನನ್ನು ನೋಡಿ ಕೋಪದಿಂದ ಹಲ್ಲು ಕಡಿಯುತ್ತ ಹೀಗೆಂದನು :

“ವಿಭೀಷಣ ! ನೀನು ರಾಕ್ಷಸ ಕುಲದಲ್ಲಿ ಹುಟ್ಟಿ ಕೂಡಾ ಕುಲಾಭಿಮಾನ ಬಿಟ್ಟು ನನ್ನ ಮುಂದೆ ಹೇಗೆ, ಯಾವ ಮುಖದಿಂದ ಬಂದೆ ? ಇದೇ ನಿನ್ನ ಸಾಕ್ಷತ್ ಜನ್ಮಸ್ಥಳವಾಗಿದ್ದು, ನನ್ನ ತಂದೆಯ ಬೆನ್ನಿಗೆ ಬಿದ್ದ ತಮ್ಮನಾಗಿದ್ದು, ನನ್ನ ಚಿಕ್ಕಪ್ಪನಾಗಿದ್ದು ನನಗೇ ಕೇಡು ಬಗೆಯಲು ನಿನಗೆ ಹೇಗೆ ಮನಸ್ಸು ಬಂತು ? ಧರ್ಮವನ್ನೇ ಕಾಣಲಾಗದ ಕುರುಡನಾದೆ. ಎಲೋ ದುಷ್ಟನೇ ! ನಿನಗೆ ಬಂಧುಗಳು ಬೇಡ, ಕುಲಬೇಡ ಸ್ನೇಹಿತರು ಬೇಡ. ರಕ್ತಸ್ಪರ್ಶ ಸಹಾ ನಿನಗಿಲ್ಲ. ನಿನ್ನವರನ್ನೆಲ್ಲಾ ಬಿಟ್ಟು ಶತ್ರುವಿಗೆ ದಾಸನಾದೆ ! ನಾಚಿಕೆಯೂ ನಿನಗಿಲ್ಲ. ಬಂಧುಗಳು ನಿನ್ನ ಕತೆ ಕೇಳಿ ಅಳುತ್ತಾರೆ. ಒಳ್ಳೆಯವರು ನಿನ್ನನ್ನು ಬಯ್ಯುತ್ತಾ ಇರುತ್ತಾರೆ. ಬೇಕಾದವರ ನಡುವೆ ದೊಡ್ಡತನದಿಂದಿರಲಿಕ್ಕೂ, ಶತ್ರುಗಳ ಮಧ್ಯೆ ಹೀನನಾಗಿರಲಿಕ್ಕೂ ಏನು ವ್ಯತ್ಯಾಸವಿದೆ ಎಂಬುದು ಕೂಡಾ ನಿನಗೆ ಗೊತ್ತಿಲ್ಲ. ನೀನು ನಮ್ಮವನಾಗಿದ್ದು, ನಿನಗೆ ಮಗನಂಥವನ ನನ್ನ ಹೋಮವನ್ನು ಭಗ್ನಮಾಡಿ ನನಗೆ ಅಪಕಾರ ಮಾಡಲು ಬಂದೆಯಲ್ಲವೆ ? ಇಂತಹ ನೀಚವಾದ ಕೆಲಸವನ್ನು ಎಂಥವರೂ ಮಾಡಲಾರರು. ಕುಲಕ್ಕೆ ಕೇಡು ಕೊಡಲಿಯ ಕಾವು ಎಂಬ ಮಾತನ್ನು ನಿಜ ಮಾಡಿದೆ.”

ಅವನ ಮಾತಿಗೆ ವಿಭೀಷಣನು ಹೀಗೆ ಉತ್ತರ ಕೊಟ್ಟ : “ಇಂದ್ರಜಿತ್ತು, ನನ್ನ ಸ್ವಭಾವವು ಹೇಗೆಂದು ನಿನಗೆ ಗೊತ್ತೇ ಇದೆ. ನನ್ನದು ಸಾತ್ವಿಕ ಸ್ವಭಾವ. ಅಧರ್ಮವನ್ನು ನಾನು ಸಹಿಸಲಾರೆ. ಇಲ್ಲದಿದ್ದರೆ ನನ್ನ ಅಣ್ಣ ರಾವಣನನ್ನು ನಾನು ಬಿಡುತ್ತಿದ್ದೆನೆ ? ನಿನ್ನ ತಂದೆಗೆ ನಾಶವಾಗುವವನಿಗಿರುವ ಎಲ್ಲಾ ಅವಲಕ್ಷಣಗಳೂ ಇದೆ. ಬೇಗದಲ್ಲೇ ಈ ಲಂಕೆಯಲ್ಲಿರುವ





ರಾಕ್ಷಸರೆಲ್ಲಾ, ನಿನ್ನ ತಂದೆಯೊಂದಿಗೆ ನಾಶವಾಗುತ್ತಾರೆ. ನಿನಗೂ ಸಾಯುವ ವೇಳೆ ಸಮೀಪಿಸಿತು. ಸಾಯಲು ನಿಂತಿರುವ ನಿನ್ನನ್ನು ಹೆಚ್ಚು ಬೈದು ಏನು ಪ್ರಯೋಜನ? ಕುಲನಾಶಕ್ಕೆ ಮೂಲನಾಗಿರುವವನೂ ನೀನೇ. ನೀನು ಮಾಯಾ ಸೀತೆಯನ್ನು ಕೊಂದು, ರಾಮಲಕ್ಷ್ಮಣರಿಗೆ ಮಹಾ ಅವಮಾನ ಮಾಡಿರುವೆ. ಇದು ವೀರನು ಮಾಡುವ ಕೆಲಸವೆ? ಇನ್ನು ನೀನು ಬದುಕಿರಲು ಸಾಧ್ಯವಿಲ್ಲ. ಲಕ್ಷ್ಮಣನೊಂದಿಗೆ ಯುದ್ಧಮಾಡಿ, ಸತ್ತುಹೋಗಿ ಯಮದೂತರಿಗೆ ವಿಧೇಯನಾಗಿ ಸೇವೆ ಮಾಡಿಕೊಂಡಿರು."

ಇಂದ್ರಜಿತ್ತು ವಿಭೀಷಣನ ಮೇಲೆ ಜಿಗುಪ್ಸೆಗೊಂಡು, ಸರ್ರನೆ ಲಕ್ಷ್ಮಣನ ಕಡೆಗೆ ತಿರುಗಿ, "ಯುದ್ಧ ಬೇಕೆ ನಿನಗೆ? ಆ ರಾತ್ರಿ ಯುದ್ಧದಲ್ಲಿ ನನ್ನ ಬಾಣಗಳ ರುಚಿ ತಿಳಿದುಕೊಂಡು ಕೂಡಾ, ಮತ್ತೆ ನನ್ನ ಮುಂದೆ ಯುದ್ಧಕ್ಕೆ ಬಂದು ನಿಂತಿದ್ದಿಯಾ? ನಿನ್ನ ಆಯುಷ್ಯ ತೀರಿದುದರಿಂದಲೇ ಅದನ್ನು ಮರೆತು ಈಗ ಸಾಯಲಿಕ್ಕೆ ಬಂದಿದ್ದೀಯೋ!" ಎಂದನು. "ಕಳ್ಳನ ಹಾಗೆ ಕಾಣದಂತೆ ಯುದ್ಧಮಾಡಿ ದೊಡ್ಡ ವೀರನ ಹಾಗೆ ಜಂಬ ಬೊಗಳುವುದು ಬೇಡ. ಈಗ ಇದಿರಿದಿರಾಗಿ ತೋರಿಸು ನಿನ್ನ ಪ್ರತಾಪ! ಮಾಯವಾಗಲು ಇನ್ನು ನಿನಗೆ ಸಾಧ್ಯವಿಲ್ಲ" ಎಂದ ಲಕ್ಷ್ಮಣ.

ತತ್‌ಕ್ಷಣವೇ ಇಂದ್ರಜಿತ್ತುವಿನ ಬಾಣಗಳು ಲಕ್ಷ್ಮಣನ ಮೇಲೆ ಹಾರತೊಡಗಿದವು. ನಿಮಿಷಮಾತ್ರದಲ್ಲಿ ಲಕ್ಷ್ಮಣನ ಶರೀರವೆಲ್ಲವೂ ರಕ್ತಮಯವಾಯಿತು. ಅದನ್ನೊಂದಿನಿತೂ ಲಕ್ಷ್ಯಮಾಡದೆ ಲಕ್ಷ್ಮಣನೂ ಮಿಂಚಿನ ವೇಗದಿಂದ ಇಂದ್ರಜಿತ್ತುವಿನ ಮೇಲೆ ಬಾಣಗಳನ್ನು ಹಾರಿಸುತ್ತಿದ್ದನು. ಇಬ್ಬರೂ ಸರಿಸಮಾನವೆಂಬಂತೆ ಯುದ್ಧ ಮಾಡುತ್ತಿದ್ದರು.

ಹೀಗೆ ಸ್ವಲ್ಪ ಹೊತ್ತು ಯುದ್ಧ ನಡೆಯುತ್ತಿರಲು, ಪರೀಕ್ಷಿಸಿ ನೋಡುತ್ತಿದ್ದ ವಿಭೀಷಣನಿಗೆ ಇಂದ್ರಜಿತ್ತುವಿನ ಮುಖದಲ್ಲಿ ಭಯದ ಛಾಯೆ ಕವಿಯುವಂತೆ ಕಂಡಿತು. ಆಗ ಅವನು ಲಕ್ಷ್ಮಣನೊಂದಿಗೆ, "ಇಂದ್ರಜಿತ್ತು ನಿನ್ನ ಏಟನ್ನು ತಾಳಲಾಗದ ಸ್ಥಿತಿಯಲ್ಲಿದ್ದಾನೆ. ಅವನನ್ನು ಕೊಲ್ಲಲು ಇದೇ ತಕ್ಕ ಸಮಯ. ಸರಿಯಾದ ಬಾಣಹೂಡು." ಎಂದನು.

ಲಕ್ಷ್ಮಣನು ಕಡು ತೀಕ್ಷ್ಣವಾದ ಬಾಣಗಳನ್ನು ಇಂದ್ರಜಿತ್ತುವಿನ ಮೇಲೆ ಪ್ರಯೋಗಿಸತೊಡಗಿದನು. ಅವುಗಳ ಪ್ರಭಾವಕ್ಕೆ ಇಂದ್ರಜಿತ್ತು ನಿಂತಲ್ಲೇ ಒರಗಿ ಮೂರ್ಛೆಹೋದನು.

ಮರು ನಿಮಿಷದಲ್ಲೇ ಅವನು ಮೂರ್ಛೆಯಿಂದ ಎಚ್ಚೆತ್ತು, ತನ್ನಿದಿರಿನಲ್ಲಿ ನಿಂತಿರುವ ಲಕ್ಷ್ಮಣನನ್ನು ನೋಡಿ, ಅವನೊಡನೆ ತಾನು ಹೇಳಿಕೊಂಡ ಪರಾಕ್ರಮಗಳನ್ನು ನೆನೆದು, ಕಡುರೊಚ್ಚಿನಿಂದ ತುಟಿಕಚ್ಚಿ ಕಣ್ಣುಗಳಿಂದ ಕಿಡಿ ಹಾರಿಸುತ್ತ, ಲಕ್ಷ್ಮಣನ ಮೇಲೆಯೂ, ವಿಭೀಷಣನ ಮೇಲೆಯೂ ಅತಿ ತೀಕ್ಷ್ಣವಾದ ಬಾಣಗಳನ್ನು ಹಾರಿಸಿದನು. ಆ ಬಾಣಗಳು ಲಕ್ಷಣನನ್ನು ಹೆಚ್ಚೇನೂ ಬಾಧಿಸಲಿಲ್ಲ.



29-4



"ಯುದ್ಧದಲ್ಲಿ ಗೆಲ್ಲಬೇಕೆಂದಿರುವವನು ಇಂಥ ಕ್ಷುದ್ರ ಬಾಣಗಳನ್ನು ಪ್ರಯೋಗಿಸುವುದೋ ?" ಎಂದು ಲಕ್ಷ್ಮಣನು ತಿರಸ್ಕಾರದ ಮಾತುಗಳನ್ನಾಡುತ್ತ ಒಂದರಮೇಲೊಂದಾಗಿ ಹರಿತವಾದ ಕಣೆಗಳನ್ನು ಇಂದ್ರಜಿತ್ತುವಿನ ಮೇಲೆ ಹಾರಿಸಿದನು.

ಲಕ್ಷ್ಮಣನ ಬಾಣಗಳಿಂದ ಇಂದ್ರಜಿತ್ತುವಿನ ಕವಚವು ಚೂರು ಚೂರಾಗಿ ಹಾರಿಹೋಯಿತು. ಅವನ ಶರೀರವು ಪೂರ್ಣ ರಕ್ತಮಯವಾಯಿತು. ಕೋಪಾವಮಾನಗಳಿಂದ ರುದ್ರನಾಗಿ ಹೋದ ಇಂದ್ರಜಿತ್ತು ಶಕ್ತಿಯುತವಾದ ಬಾಣಗಳನ್ನು ಪ್ರಯೋಗಿಸಿ ಲಕ್ಷ್ಮಣನ ಕವಚವನ್ನೂ ಛಿದ್ರಛಿದ್ರ ಮಾಡಿದನು. ಈ ವಿಧವಾಗಿ ಅವರಿಬ್ಬರೂ ಒಬ್ಬರಿಗೊಬ್ಬರು ಕಡಿಮೆಯಿಲ್ಲದೆ ಬಹಳ ಹೊತ್ತು ಹೋರಾಡಿದರು. ಇಬ್ಬರೂ ವಿಜಯವನ್ನೇ ಆಶಿಸಿ ಹಠ ಹಿಡಿದೇ ಹೋರಾಡುತ್ತಿದ್ದರು. ಹಟವೂ ರೊಚ್ಚುಕೆಚ್ಚುಗಳೂ ಕೂಡಿದ ಈ ಬಗೆಯ ಯುದ್ಧವು ಯಾರೋ ಒಬ್ಬರು ಸತ್ತರೆ ಹೊರತು ನಿಲ್ಲುವಂತಹುದಲ್ಲ. ಇರ್ಕಡೆಯ ವರೂ ಯುದ್ಧನಿಲ್ಲುವ ಕ್ಷಣಗಳನ್ನೇ ಇದಿರು ನೋಡುತ್ತಿದ್ದರು.

ಲಕ್ಷ್ಮಣ ಇಂದ್ರಜಿತ್ತರ ಯುದ್ಧವನ್ನು ನೋಡುತ್ತಿರುವ ವಿಭೀಷಣನು, ಇನ್ನು ತಾನು ಸುಮ್ಮನಿರಬಾರದೆಂದುಕೊಂಡು, ತನ್ನ ನಾಲ್ವರು ಮಂತ್ರಿಗಳೊಂದಿಗೆ ಯುದ್ಧಕ್ಕೆ ತಲೆ ಹಾಕಿ ವಾನರಸೇನೆಯೊಂದಿಗೆ ಹೀಗೆಂದನು :

"ವಾನರವೀರರೇ, ಇನ್ನು ರಾವಣನಿಗೆ ಇಂದ್ರಜಿತ್ತುವಿನ ಹೊರತು ಬೇರೆ ಗತಿ ಇಲ್ಲ. ಆದುದರಿಂದ ಇವನು ಬದುಕಿಹೋಗಲು ಬಿಡಬಾರದು. ಉಪೇಕ್ಷಿಸಬೇಡಿ. ಈಗಾಗಲೇ ನೀವು ರಾಕ್ಷಸ ವೀರರನ್ನೆಲ್ಲಾ ಕೊಂದಿದ್ದೀರಿ. ಈ ಒಬ್ಬ ಇಂದ್ರಜಿತ್ತು ನಿಮಗೊಂದು ಲೆಕ್ಕವೇ ? ಇವನನ್ನು ಕೂಡಾ ಕೊಂದು ಬಿಟ್ಟರೆಂದರೆ, ರಾವಣನು ದಿಕ್ಕಿಲ್ಲದ ಪಕ್ಷಿಯಾಗುತ್ತಾನೆ. ಇವನನ್ನು ನಾನೇ ಕೊಲ್ಲುತ್ತಿದ್ದೆನಾದರೂ ನನಗೆ ಮಗನಂಥವನು. ನಾನು ಇವನನ್ನು ಕೊಲ್ಲುವುದು ಸರಿಯಾಗದು. ನೀವೆಲ್ಲಾ ಇಂದ್ರಜಿತ್ತುವಿಗೆ ಸಹಾಯವಾಗಿರುವ ಸೇನೆಯನ್ನು ಕೊಂದುಬಿಡಿ."

ಈ ಮಾತುಗಳನ್ನು ಕೇಳಿ ವಾನರರು ಬಾಲ ಕುಣಿಸಿ, ಸಿಂಹನಾದ ಮಾಡುತ್ತ ರಾಕ್ಷಸ ಸೇನೆಯ ಮೇಲೆ ವಿಜೃಂಭಿಸಿದರು. ವಿಭೀಷಣನೂ ಅವನ ಮಂತ್ರಿಗಳೂ ಸಹ ರಾಕ್ಷಸರ ಸೇನೆಯೊಂದಿಗೆ ಯುದ್ಧ ನಡೆಸತೊಡಗಿದರು.

ಇಷ್ಟರಲ್ಲಿ ಲಕ್ಷ್ಮಣನು ಇಂದ್ರಜಿತ್ತುವಿನ ರಥದ ಸಾರಥಿಯ ತಲೆಯನ್ನು ಒಂದು ಬಾಣದಿಂದ ಹಾರಿಸಿಬಿಟ್ಟನು. ಆಗ ಇಂದ್ರಜಿತ್ತು ತಾನೇ ರಥವನ್ನು ನಡೆಸುತ್ತ ಆಶ್ಚರ್ಯಕರವಾಗಿ ಯುದ್ಧ ಮಾಡತೊಡಗಿದನು. ಅವನ ವೀರಪ್ರತಾಪ ಸಾಮರ್ಥ್ಯಗಳು ವಿಶೇಷವೆನಿಸಿದರೂ ಅವನನ್ನು ಪೀಡಿಸಲು ಲಕ್ಷ್ಮಣನಿಗೆ ಇನ್ನೂ ಸೌಕರ್ಯವಾಯಿತು. ಈ ಪರಿ

ಸ್ಥಿತಿಯಲ್ಲಿ ಇಂದ್ರಜಿತ್ತುವಿನಲ್ಲಿದ್ದ, ತನಗಾರೂ ಇದಿರಿಲ್ಲವೆಂಬ ಮಹಾಗರ್ವ ಅಡಗಿಹೋಯಿತು. ಅವನ ಮುಖದಲ್ಲಿ ಕಾಣುವ ಬದಲಾವಣೆಯನ್ನು ಗಮನಿಸಿ ವಾನರರು ಸಂತೋಷದಿಂದ ಇನ್ನಿಷ್ಟು ಜೋರಾಗಿ ಯುದ್ಧ ಮಾಡತೊಡಗಿದರು.

ಪ್ರಮಾಥಿ, ಶರಭ, ರಭಸ, ಗಂಧಮಾದನ ಎಂಬ ನಾಲ್ವರು ವಾನರವೀರರು ಇಂದ್ರಜಿತ್ತುವಿನ ರಥಕ್ಕೆ ಹೂಡಲ್ಪಟ್ಟ ನಾಲ್ಕು ಕುದುರೆಗಳ ಮೇಲೂ ಒಂದೇ ಸಾರಿ ಮುಗಿಬಿದ್ದರು. ಮರುಕ್ಷಣ ಆ ನಾಲ್ಕು ಕುದುರೆಗಳು ನೆತ್ತರು ಕಾರುತ್ತ ಸತ್ತುಬಿದ್ದುವು.

ಆ ಸಮಯದಲ್ಲಿ ಇಂದ್ರಜಿತ್ತು ರಥದಿಂದ ನೆಲದ ಮೇಲೆ ಹಾರಿ ಲಕ್ಷ್ಮಣನ ಮೇಲೆ ಬಾಣವರ್ಷಣ ಮಾಡುತ್ತ ವಿಜೃಂಭಿಸಿಕೊಂಡೇ ಇದ್ದನು. ಅವನ ಸುತ್ತಲೂ ರಾಕ್ಷಸರು ನಿಂತಿದ್ದರು.

ಇಂದ್ರಜಿತ್ತು ಅವರೊಂದಿಗೆ "ನೀವು ಯುದ್ಧ ಮಾಡಿಕೊಂಡಿರಿ. ನಿಮ್ಮ ಮರೆಯಲ್ಲಿ ನಾನು ನಗರಕ್ಕೆ ಹೋಗಿ ಇನ್ನೊಂದು ರಥದ ಮೇಲೆ ಏರಿ ಬರುತ್ತೇನೆ" ಎಂದನು.

ಅವನು ಆ ಪ್ರಕಾರವೇ ಗುಟ್ಟಾಗಿ ಲಂಕೆಯೊಳಗೆ ಓಡಿ, ಒಳ್ಳೆಯದೊಂದು ರಥವನ್ನು ಸಿದ್ಧಮಾಡಿಸಿ ಅದರ ಮೇಲೇರಿಕೊಂಡು ಮತ್ತೆ ಯುದ್ಧಕ್ಕೆ ಬಂದನು. ಅವನು ಇದ್ದಕ್ಕಿದ್ದಹಾಗೆ ಹೊಸ ರಥದಲ್ಲಿ ಪ್ರತ್ಯಕ್ಷವಾದುದನ್ನು ನೋಡಿ, ಲಕ್ಷ್ಮಣನಿಗೆ ಮಾತ್ರವಲ್ಲ, ವಿಭೀಷಣನಿಗೇ ಆಶ್ಚರ್ಯವಾಯಿತು. ವಾನರರ ಆಶ್ಚರ್ಯಕ್ಕೆ ಪಾರವೇ ಇಲ್ಲ.

ಈ ಸಾರಿ ಇಂದ್ರಜಿತ್ತು ತನ್ನ ಹೊಸ ಹೊಸ ಬಾಣಗಳಿಂದ ವಾನರರ ಸೇನೆಗೆ ಅಪರಿಮಿತ ನಷ್ಟವನ್ನುಂಟುಮಾಡಿದನು. ಅದನ್ನು ನೋಡಿ ಲಕ್ಷ್ಮಣನು ಇಂದ್ರಜಿತ್ತುವಿನ ಬಿಲ್ಲನ್ನು ಮುರಿದನು. ಆದರ ಬೆನ್ನಿಗೇ ಅವನ ಸಾರಥಿಯ ತಲೆಯನ್ನೂ ಹಾರಿಸಿದನು. ಆದರೂ ಇಂದ್ರಜಿತ್ತು ಒಂದೇ ಸಮನೆ



ಯುದ್ಧ ಮಾಡುತ್ತ ವಿಭೀಷಣನನ್ನು ಕೂಡಾ ತನ್ನ ಬಾಣಗಳಿಂದ ಗಾಯಪಡಿಸಿದನು. ವಿಭೀಷಣನು ಉರಿದುಬಿದ್ದು ತನ್ನ ಗದೆಯಿಂದ ಬಡಿದು ಇಂದ್ರಜಿತ್ತುವಿನ ರಥಾಶ್ವಗಳನ್ನು ಕೊಂದನು.

ತರುವಾಯ ಇಂದ್ರಜಿತ್ತೂ ಲಕ್ಷ್ಮಣನೂ ಒಬ್ಬರ ಮೇಲೊಬ್ಬರು ಅನೇಕ ಅಸ್ತ್ರಪ್ರತ್ಯಸ್ತ್ರಗಳನ್ನು ಪ್ರಯೋಗಿಸತೊಡಗಿದರು. ಕಟ್ಟಕಡೆಗೆ ಲಕ್ಷ್ಮಣನು ಪ್ರಯೋಗಿಸಿದ ಐಂದ್ರಾಸ್ತ್ರದಿಂದ ಇಂದ್ರಜಿತ್ತುವಿನ ತಲೆ ಮುಂಡದಿಂದ ಬೇರಾಗಿ ನೆಲಕ್ಕೆ ಬಿತ್ತು.

ವಿಭೀಷಣನೂ ವಾನರರೂ ಸಿಂಹನಾದ ಮಾಡಿದರು. ವಾನರರು ವಿಜಯಗರ್ವದಿಂದ ವಧೆಮಾಡುವುದನ್ನು ನೋಡಿ, ರಾಕ್ಷಸರು ಇಮ್ಮಡಿ ಮುಮ್ಮಡಿ ಶೋಕದಿಂದ ಪ್ರಲಾಪಿಸುತ್ತಾ ದಿಕ್ಕೆಟ್ಟು ಲಂಕೆಯೊಳಗೆ ಓಡಿಹೋದರು.

ಇಂದ್ರಜಿತ್ತು ಸತ್ತುಬಿದ್ದ ಕೂಡಲೇ ವಾನರರು ಅಪರಿಮಿತ ಸಂತೋಷದಿಂದ ಲಕ್ಷ್ಮಣನನ್ನು

ಕೊಂಡಾಡ ತೊಡಗಿದರು. ಲಕ್ಷ್ಮಣನು ರಾಮನ ಬಳಿಗೆ ಹಿಂದಿರುಗಿ ನಮಸ್ಕಾರ ಮಾಡಿ ವಿನಯದಿಂದ ನಿಂತನು. ರಾಮನು ಅವನನ್ನು ಆಲಿಂಗಿಸಿಕೊಂಡು "ಇಂದ್ರಜಿತ್ತುವಿನ ಮರಣವೆಂದರೆ ರಾವಣನ ಬಲಗೈ ಮುರಿದುಬಿದ್ದಂತಾಯಿತು. ಇನ್ನು ರಾವಣನೊಬ್ಬ ಕ್ಷುದ್ರನೇ. ಅತಿ ಸುಲಭವಾಗಿ ಕೊಲ್ಲಬಲ್ಲೆ" ಎಂದು ಹೇಳುತ್ತ, ಲಕ್ಷ್ಮಣನ ಗಾಯಗಳಿಗೆ ಚಿಕಿತ್ಸೆಮಾಡಲು ಸುಷೇಣನಿಗೆ ಹೇಳಿದನು.

ಇಂದ್ರಜಿತ್ತುವಿನೊಂದಿಗೆ ಯುದ್ಧಭೂಮಿಗೆ ಬಂದು ಅಲ್ಲಲ್ಲಿ ವಾನರವೀರರೊಂದಿಗೆ ಯುದ್ಧ ಮಾಡುತ್ತಿದ್ದ ರಾಕ್ಷಸರು, ಇಂದ್ರಜಿತ್ತು ಸತ್ತುಹೋದುದನ್ನು ಕೇಳಿ ಕೈಕಾಲೇ ಬಿದ್ದವರಾಗಿ ದುಃಖಿಸುತ್ತಾ ರಾವಣನ ಬಳಿಗೆ ಹೋಗಿ ವಿಭೀಷಣನ ಸಹಾಯದಿಂದ ಲಕ್ಷ್ಮಣನು ಇಂದ್ರಜಿತ್ತುವನ್ನು ಕೊಂದನೆಂದು ಮೊರೆಯಿಟ್ಟರು. ಆ ವಾರ್ತೆ ಕಿವಿಗೆ ಬಿದ್ದ ಕೂಡಲೇ ರಾವಣನು ಹಾಯೆಂದು ಕೂಗಿ ಮೂರ್ಛೆಬಿದ್ದನು.

ಮೂರ್ಛೆಯಿಂದ ಎಚ್ಚೆತ್ತ ಮೇಲೆ ರಾವಣನು ಇಂದ್ರಜಿತ್ತುವನ್ನು ನೆನೆನೆನೆದು ಬಹಳ ಹೊತ್ತು ಅತ್ತನು. ಅವನ ಪುತ್ರ ಶೋಕವು ವೈರಾಗ್ಯಕ್ಕೆ ತಿರುಗಿ ಕ್ರಮಕ್ರಮವಾಗಿ ಕ್ರೋಧವಾಗಿ ಬದಲಾಯಿಸಿತು. ಇಷ್ಟಕ್ಕೂ ಮೂಲಳಾದ ಸೀತೆಯನ್ನೇ ಕೊಂದುಬಿಡಬೇಕೆಂದು ತೋರಿತು ಅವನಿಗೆ

ಅವನು ತನ್ನ ಸಮೀಪವಿರುವ ರಾಕ್ಷಸರೊಂದಿಗೆ "ನನ್ನ ಮಗನಾದ ಇಂದ್ರಜಿತ್ತು ಮಾಯಾ ಸೀತೆಯನ್ನು ವಾನರರ ಎದುರಿನಲ್ಲಿ ಕೊಂದು ತೋರಿಸಿದ. ನಾನು ನಿಜವಾದ ಸೀತೆಯನ್ನೇ ಕೊಂದು ತೋರಿಸುತ್ತೇನೆ. ಯಾವಾಗಲೂ ಆ ಹಾಳು ರಾಮನನ್ನೇ ನೆನೆದುಕೊಂಡಿರುವ ಸೀತೆ ಇನ್ನೇಕೆ ಬದುಕಿರಬೇಕು? ಕೊಂದುಬಿಡುತ್ತೇನೆ." ಎಂದು ಹೇಳಿ ಕತ್ತಿ ಹಿಡಿದುಕೊಂಡು ಎದ್ದುನಿಂತನು.

ಈ ಸಂಗತಿಯನ್ನು ತಿಳಿದು ಮಂಡೋದರಿಯೂ, ರಾವಣನ 'ಮಂತ್ರಿಗಳೂ ಅವನನ್ನು ಅಂತಹ ನೀಚ ಕಾರ್ಯದಿಂದ ತಡೆದು ನಿಲ್ಲಿಸಿದರು.

"ಅದಕ್ಕಿಂತ ಈಗಲಾದರೂ ಸೀತೆಯನ್ನು ರಾಮನಿಗೆ ಒಪ್ಪಿಸಿ ಕ್ಷಮೆ ಕೇಳಿಕೊಂಡರೆ ಸರ್ವನಾಶವನ್ನಾದರೂ ತಪ್ಪಿಸಬಹುದು. ಅದೇ ಒಳ್ಳೆಯದು" ಎಂದು ರಾವಣನಿಗೆ ಹಿತವಚನ ಹೇಳಿದಳು ಮಂಡೋದರಿ.

"ಈ ಕೋಪವನ್ನು ರಾಮನ ಮೇಲೆ ತೋರಿಸಬೇಕಲ್ಲದೆ, ಸೀತೆಯನ್ನು ಕೊಲ್ಲುವುದರಿಂದ ಯಾವುದನ್ನೂ ಸಾಧಿಸಿದಂತಾಗುವುದಿಲ್ಲ" ಎಂದರು ಮಂತ್ರಿಗಳು. ತನ್ನ ಕರ್ತವ್ಯವು ರಾಮನನ್ನು ಕೊಲ್ಲುವುದೇ ಹೊರತು ಸೀತೆಯನ್ನು ಕೊಲ್ಲುವುದಲ್ಲವೆಂದು ತಿಳಿದುಕೊಂಡು ರಾವಣನು ಶಾಂತನಾಗಿ, ಅತ್ಯುಗ್ರವಾದ ಲಂಕಾಯಾಗವನ್ನು ಪ್ರಾರಂಭಮಾಡಿದನು.

